ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ನವಮಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

---

ಶ್ರೀಮಾ ಜಯತಿ ಕಲ್ಕೀನ್ದ್ರೋ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ನವಮಶತಕದಲ್ಲಿ—ಪ್ರಥಮದಶಕ.

(ಕೊಣ್ಡಪೆಣ್ಡಿರ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಉತ್ತರ ಮಧುರೆಯಲ್ಲಿ ಅವತರಿಸಿದ ಶ್ರೀ ಕೃಷ್ಣರೂಪಿಯಾದ ಭಗವನ್ತನೇ ನಿರುಪಾಧಿಕಬನ್ಧುವೆಂದೂ ಅವನೇ ಸೇವ್ಯನೆಂದೂ ಹೇಳುತ್ತಾರೆ.)

---

(೧) ಕೊಣ್ಡಪೆಣ್ಡಿರ್ ಮಕ್ಕಳುಱ್ಱಾರ್ ಶುಱ್ಱತ್ತವರ್
ಪಿಱರುಮ್,
ಕಣ್ಡದೋಡು ಪಟ್ಟದಲ್ಲಾಲ್ ಕಾದಲ್ ಮಱ್ಱಿ
ಯಾದುಮಿಲ್ಲೈ,
ಎಣ್ದಿಶೈಯುಮ್ ಕೀೞುಮ್ ಮೇಲುಮ್
ಮುಱ್ಱವುಮುಣ್ಡಪಿರಾನ್,
ತೊಣ್ಡರೋಮಾಯುಯ್ಯಲಲ್ಲಾಲಿಲ್ಲೈ ಕಣ್ಡೀರ್
ತುಣೈಯೇ.

ಪ್ರ॥ ಕೊಣ್ಡ-ನಮ್ಮಿಂದ ಅಂಗೀಕರಿಸಲ್ಪಟ್ಟ, ಪೆಣ್ಡಿರ್-ಪತ್ನೀಜನರೂ, ಮಕ್ಕಳ್-ಪುತ್ರೀಪುತ್ರರೂ, ಉಱ್ಱಾರ್-ಸಮ್ಬನ್ಧಿಗಳೂ, ಶುಱ್ಱತ್ತವರ್-ಬನ್ಧುಗಳೂ, ಪಿಱರುಮ್-ಇತರರೂ, ಕಣ್ಡದೋಡು-(ನಮ್ಮ ಕೈಯಲ್ಲಿ) ಪ್ರಯೋಜನವು ಇದ್ದಾಗ, ಪಟ್ಟದು ಅಲ್ಲಾಲ್-ಆಶ್ರಯಿಸುತ್ತಾರಲ್ಲದೆ, ಮಱ್ಱಿಯಾದುಮ್-ಬೇರೆ ಯಾವ ವಿಧದಲ್ಲೂ ಸ್ವಲ್ಪವೂ, ಕಾದಲ್ ಇಲ್ಲೈ-ಸ್ನೇಹವುಳ್ಳವರಲ್ಲ. (ಆದುದರಿಂದ) ಎಣ್‌ದಿಶೈಯುಮ್-ಎಂಟು ದಿಕ್ಕುಗಳೊಡನೆ ಕೂಡಿದ, ಕೀೞುಮ್-ಅಧೋಲೋಕಗಳನ್ನೂ, ಮೇಲುಮ್ - ಊರ್ಧ್ವಲೋಕಗಳನ್ನೂ, ಮುಱ್ಱವುಮ್ - ಮತ್ತೂ ಸಮಸ್ತ ಲೋಕಗಳನ್ನೂ, ಉಣ್ಡ-ಭಕ್ಷಿಸಿದ, ಪಿರಾನ್-ಮಹೋಪಕಾರಕನಾದ ಸ್ವಾಮಿಗೆ, ತೊಣ್ಡರೋಮಾಯ್ - (ನಾವು) ದಾಸಭೂತರಾಗಿ, ಉಯ್ಯಲ್ ಅಲ್ಲಾಲ್-ಉಜ್ಜೀವಿಸಬೇಕೇ ಹೊರತು, ಇಲ್ಲೈತುಣೈ-ಬೇರೆ ನಮಗೆ ಸಹಾಯಭೂತರೇ ಇಲ್ಲ. ಕಣ್ಡೀರ್-ನೋಡಿರಿ.

( ಸ-ಗಾ-ರ )—

ಪತ್ನೀಪುತ್ರಸುತಾದಿಬನ್ಧುಪರಿವಾರಾದ್ಯಾಃ ಫಲಾಪೇಕ್ಷಿಣೋ
ವಿತ್ತೇ ಹಸ್ತಗತೇ ಹಿ ನಃ ಪರಿಜನಾ ನೈವಾನ್ಯದಾ ಸಾದರಾಃ ।
ತಸ್ಮಾದಷ್ಟದಿಶಾಸು ಚೋಪರಿತಲೇಽಧಸ್ತಾಚ್ಚ ಸರ್ವತ್ರ ಯ-
ದ್ವಿಶ್ವಂ ತತ್ಪರಿಭುಜ್ಯ ರಕ್ಷಿತುರಮೀ ನಾಥಸ್ಯ ದಾಸಾ ವಯಮ್॥

ತಾ॥ ಪತ್ನೀಪುತ್ರಾದಿ ಬನ್ಧುಪರಿವಾರಗಳು ನಮ್ಮ ಕೈಯಲ್ಲಿ ದ್ರವ್ಯವಿದ್ದಾಗ ಬಂದು ಆಶ್ರಯಿಸುತ್ತಾರಲ್ಲದೆ ವಾಸ್ತವವಾದ ಪ್ರೀತಿಯುಳ್ಳವರಲ್ಲ. ಆದುದರಿಂದ ಸರ್ವಲೋಕೇಶ್ವರನಾದ ಸ್ವಾಮಿಯ ದಾಸಭೂತರಾಗಿಯೇ ನಾವು ಉಜ್ಜೀವಿಸಬೇಕು ; ಬೇರೆ ರಕ್ಷಣವೇ ಇಲ್ಲ.

(೨) ತುಣೈಯುಮ್ ಶಾರ್ವುಮಾಕುವಾರ್ ಪೋಲ್
ಶುಱ್ಱತ್ತವರ್ ಪಿಱರುಮ್,
ಅಣೈಯವನ್ದ ಆಕ್ಕಮುಣ್ಡೇಲ್ ಅಟ್ಟೈಕಳ್ ಪೋಲ್
ಶುವೈಪ್ಪರ್,
ಕಣೈಯೊನ್ಱಾಲೇ ಏೞ್ ಮರಮುಮೆಯ್ದ
ಎಮ್ಕಾರ್ಮುಕಿಲೈ,
ಪುಣೈಯೆನ್ಱುಯ್ಯಪ್ಪೋಕಲಲ್ಲಾಲಿಲ್ಲೈ ಕಣ್ಡೀರ್ ಪೊರುಳೇ.

ಪ್ರ|| ತುಣೈಯುಮ್ – (ಸುಖದುಃಖಗಳಲ್ಲಿ) ಸಹಾಯಭೂತರಾಗಿಯೂ, ಶಾರ್ವುಮ್–ಆಪದ್ರಕ್ಷಕರಾಗಿಯೂ, ಆಕುವಾರ್‌ಪೋಲ್–ಆಗುವವರಂತೆ, ಶುಱ್ಱತ್ತವರ್–ಬನ್ಧುಗಳೂ, ಪಿಱರುಮ್–ಇತರರೂ, ಅಣೈನ್ದು ಆಕ್ಕಮ್–ಹಸ್ತಗತವಾದ ಪ್ರಯೋಜನವು, ಉಣ್ಡೇಲ್–ಉಂಟಾದರೆ, ಅಟ್ಟೈಕಳ್‌ಪೋಲ್–ಅಟ್ಟೆಹುಳಗಳಂತೆ, ಶುವೈಪ್ಪರ್–ರಸವನ್ನೆಲ್ಲಾ ಆಕರ್ಷಿಸಿ ಹೀರಿಬಿಡುವರು. ಕಣೈಯೊನ್ಱಾಲೇ–ಒಂದು ಬಾಣದಿಂದಲೇ, ಏೞ್ಮರಮುಮ್ – ಏಳು ಮರಗಳನ್ನೂ, ಎಯ್‌ದ–ನಾಶಪಡಿಸಿದ, ಎಮ್–ನಮ್ಮ, ಕಾರ್‌ಮುಕಿಲೈ – ಕಾಳಮೇಘ ಸ್ವಭಾವನನ್ನು, ಪುಣೈಯೆನ್ಱು–ರಕ್ಷಕನೆಂದು ನಂಬಿ, ಉಯ್ಯಪ್ಪೋಕಲಲ್ಲಾಲ್ – ಉಜ್ಜೀವಿಸಬೇಕೇ ಹೊರತು, ಪೊಱುಳ್ ಇಲ್ಲೈ–ಬೇರೆ ಪ್ರಯೋಜನವೇ ಇಲ್ಲ. ಕಣ್ಡೀರ್–ನೋಡಿರಿ.

( ಸ–ಗಾ–ರ || )—

ಆಪ್ತಾ ಬನ್ಧುಜನಾಶ್ಚ ರಕ್ಷಣಪರಾಸ್ತೇಽಪಿ ಚ ನಃ ಪಾರ್ಶ್ವಗಾ–
ಸ್ಸರ್ವೇ ಸ್ವಾರ್ಥಪರಾಯಣಾ ಹಿ ನಟನ್ತ್ಯಃ ಕರ್ಷನ್ತಿ ಸರ್ವಂ ರಸಮ್ |
ತಸ್ಮಾದೇಕಶರೇಣ ಸಪ್ತವಿಟಪಿಚ್ಛೇತ್ತುಃ ಪರಂ ಸ್ವಾಮಿನೋ
ದಾಸ್ಯಾದೇವ ಭವಾಮ ನೀಲಜಲದಸ್ಯೋಜ್ಜೀವಿತಾ ರಕ್ಷಿತಾಃ ||

ತಾ|| ಸಕಲ ಬನ್ಧುಪರಿವಾರಗಳೂ ಹಸ್ತಗತವಾದ ಪ್ರಯೋಜನವು ಉಂಟಾದರೆ ಅಟ್ಟೆಗಳಂತೆ ಬಂದು ಅಂಟಿಕೊಂಡು ರಸವನ್ನೆಲ್ಲಾ ಹೀರಿಬಿಡುವರು. ಆದುದರಿಂದ—ಒಂದು ಬಾಣದಿಂದಲೇ ಸಪ್ತವೃಕ್ಷಗಳನ್ನೂ ಕತ್ತರಿಸಿದ ಕಾಳಮೇಘ ಸದೃಶನಾದ ನಮ್ಮ ಸ್ವಾಮಿಯನ್ನೇ ರಕ್ಷಕನೆಂದು ನಂಬಿ ನಾವು ಉಜ್ಜೀವಿಸಬೇಕೇ ಹೊರತು ಬೇರೆ ಉಪಾಯವೇ ಇಲ್ಲ. ಇದನ್ನು ಚೆನ್ನಾಗಿ ತಿಳಿಯಿರಿ.

(೩) ಪೊರುಳ್‌ಕೈಯುಣ್ಡಾಯ್ ಚೆಲ್ಲಕ್ಕಾಣಿಲ್ ಪೋಱ್ಱಿ
ಯೆನ್ಱೇಱ್ಱೆೞುವರ್,
ಇರುಳ್‌ಕೊಳ್ ತುನ್ಬತ್ತಿನ್ಮೈ ಕಾಣಿಲ್ ಎನ್ನೇ
ಯೆನ್ಬಾರುಮಿಲ್ಲೈ,
ಮರುಳ್‌ಕೊಳ್ ಶೆಯ್‌ಕೈ ಯಶುರರ್ ಮಙ್ಗ
ವಡಮದುರೈಪ್ಪಿಱನ್ದಾಱ್ಕು,
ಅರುಳ್‌ಕೊಳಾಳಾಯುಯ್ಯಲಲ್ಲಾಲಿಲ್ಲೈ ಕಣ್ಡೀರರಣೇ.

ಪ್ರ॥ ಕೈಪ್ಪೊರುಳ್ ಉಣ್ಡಾಯ್ – ಕೈಯಲ್ಲಿ ದ್ರವ್ಯವು ಉಂಟಾಗಿ, ಶೆಲ್ಲಕ್ಕಾಣಿಲ್–ನಡೆಯುತ್ತಿರುವಂತೆ ಕಂಡರೆ, ಪೋಱ್ಱಿಯೆನ್ಱು – (ನಿಮಗೆ ಸ್ವಸ್ತಿ–ಎಂದು) ಸ್ತೋತ್ರಮಾಡಿ, ಎಯ್ತ್ತು – ಕೊಟ್ಟಿದ್ದನ್ನು ತೆಗೆದುಕೊಂಡು, ಎಱ್ಱವರ್ – ಓಡಿಹೋಗುವರು. ಇರುಳ್‌ಕೊಳ್ – ಅಜ್ಞಾನಾನ್ಧಕಾರಾಧಿಕ್ಯದಿಂದ, ತುನ್ಬತ್ತು–ದುಃಖರೂಪವಾದ, ಇನ್ಮೈ–ದಾರಿದ್ರ್ಯವು, ಕಾಣಿಲ್–ಕಣ್ಣಿಗೆ ಕಂಡರೆ, ಎನ್ನೇ ಎನ್ಬಾರುಮಿಲ್ಲೈ – ಅಯ್ಯೋ! ಎಂದು ಕೃಪೆಮಾಡುವವರೇ ಇಲ್ಲ. ಮರುಳ್ ಕೊಳ್ – ಎಲ್ಲರ ಮನಸ್ಸನ್ನೂ ಕ್ಲೇಶಪಡಿಸುವಂತಹ, ಶೆಯ್‌ಕೈ – ಘೋರಕೃತ್ಯಗಳುಳ್ಳ, ಅಶುರರ್–ರಾಕ್ಷಸರು, ಮಙ್ಗ–ನಾಶಹೊಂದುವಂತೆ, ವಡಮದುರೈಪ್ಪಿಱನ್ದಾಙ್ಕು–ಉತ್ತರಮಧುರೆಯಲ್ಲಿ ಅವತರಿಸಿದ ಕೃಷ್ಣನಿಗೆ, ಅರುಳ್‌ಕೊಳ್–ಕೃಪಾಪಾತ್ರರಾದ, ಆಳಾಯ್–ಕಿಂಕರರಾಗಿ, ಉಯ್ಯಲ್ ಅಲ್ಲಾಲ್ – ಉಜ್ಜೀವಿಸಬೇಕಲ್ಲದೆ, ಅರಣ್ ಇಲ್ಲೈ – ಬೇರೆ ರಕ್ಷಣವು ಇಲ್ಲ. ಕಣ್ಡೀರ್ – ನೋಡಿರಿ (ಇದನ್ನು ತಿಳಿಯಿರಿ).

( ಸ–ಗಾ–ರ ॥ )—

ವಿತ್ತೇ ಹಸ್ತಗತೇ ಹಿ ನಃ ಪರಿಜನಾಸ್ಸ್ವಸ್ತೀತಿ ನಾನಾಸ್ತುತಿಂ
ಕೃತ್ವಾ ಯಾನ್ತಿ ಧನಗ್ರಹಾ ನ ಹಿ ಭಜನ್ತ್ಯಸ್ಮಾನ್ ದರಿದ್ರಾಯಿತಾನ್ ।
ನಾನಾಕಣ್ಟಕರಾಕ್ಷಸ–ಪ್ರಮಥನಂ ನಾಥಂ ಶ್ರಿತಾಶ್ಶ್ರೇಯಸ್ಸ್ವಯಂ
ಜಾತಂ ಶ್ರೀಮಥುರಾಪುರೇ ಹರಿಮಮುಂ ನಾನ್ಯಚ್ಛರಣ್ಯಂ ಹಿ ನಃ ॥

ತಾ॥ ನಿಮ್ಮ ಕೈಯಲ್ಲಿ ದ್ರವ್ಯವು ಇದ್ದಾಗ ನಿಮ್ಮನ್ನು ಸ್ತೋತ್ರಮಾಡಿ ಸಿಕ್ಕಿದ್ದನ್ನು ತೆಗೆದುಕೊಂಡು ಓಡಿಹೋಗುವರು. ದುಃಖರೂಪವಾದ ದಾರಿದ್ರ್ಯವು ಉಂಟಾದರೆ "ಅಯ್ಯೋ!" ಎಂದು ಹೇಳಿ ಕೃಪೆಮಾಡುವವರೇ ಇಲ್ಲ. ಆದುದರಿಂದ ಘೋರರಾಕ್ಷಸಧ್ವಂಸಕನಾದ ಉತ್ತರಮಧುರಾಪುರಿಯಲ್ಲಿ ಅವತರಿಸಿದ ಕೃಷ್ಣನ ಕೃಪೆಗೆ ಪಾತ್ರರಾಗಿ ಅವನ ಕಿಂಕರರಾಗಿ ಉಜ್ಜೀವಿಸಬೇಕಲ್ಲದೆ ಬೇರೆ ಉಪಾಯವೇ ಇಲ್ಲ ; ತಿಳಿಯಿರಿ.

(೪) ಅರಣಮಾವರಱ್ಱಕಾಲೈಕ್ಕೆನ್ಱಮೈಕ್ಕಪ್ಪಟ್ಟಾರ್,
ಇರಣಙ್ಗೊಣ್ಡ ತೇಪ್ಪರಾವರಿನ್ಱಿಯಿಟ್ಟಾಲುಮಃದೇ,
ವರುಣಿತ್ತೆನ್ನೇ ವಡಮದುರೈಪ್ಪಿಱನ್ದವನ್ ವಣ್ಪುಕಳೇ
ಶರಣೆನ್ಱುಯ್ಯಪ್ಪೋಕಲಲ್ಲಾಲಿಲ್ಲೈ ಕಣ್ಡೀರ್ ಶದಿರೇ.

ಪ್ರ॥ ಅರ್ಪ್ಪ ಕಾಲ್ಲೈಕ್ಕ – ಕೈಯಲ್ಲಿರುವುದೆಲ್ಲಾ ನಷ್ಟವಾದಾಗ, ಅರಣಮ್ ಆವರ್ – ನಮಗೆ ರಕ್ಷಕರಾಗುವರು, ಎನ್ನೆನು – ಎಂದು ಹೇಳಿ ಹೇಳಿ, ಅಪ್ಪೈಕ್ಕ ಪಟ್ಟಾರ್–ದ್ರವ್ಯಾದಿಗಳಿಂದ ವಶೀಕೃತರಾದವರು, ಇರಣಮ್ ಕೊಣ್ಡು–ಸಿಕ್ಕಿದ್ದನ್ನು ತೆಗೆದುಕೊಂಡು ಹೋಗುವ, ತೇಪ್ಪರ್ ಆವರ್ - (ವಂಚಕರಾದ) ಕ್ಷುದ್ರಜನರಾಗುವರು. ಇನ್ನಿ ಇಟ್ಟಾಲುಮ್–ನಾವು ಅವರನ್ನು ದೂರದಲ್ಲಿ ಬಿಟ್ಟಾಗ್ಯೂ, ಅ.: ದೇ– ಅವರ ಕೃತ್ಯವು ಆದೇ ಆಗುವುದು. ವರುಣಿತ್ತು ಎನ್ನೇ–ಅದನ್ನು ವರ್ಣಿಸಿ ಏನು ಪ್ರಯೋಜನ? ವಡಮದುರೈಪ್ಪಿರನ್ದವ – ಉತ್ತರಮಧುರೆಯಲ್ಲಿ ಹುಟ್ಟಿದ ಸ್ವಾಮಿಯ, ವಣ್ಪುಕಳ್ಳೇ–ಉದಾರ ಗುಣಗಳನ್ನೇ, ಶರಣ್ ಎನ್ರು–ರಕ್ಷಕವೆಂದು ನಂಬಿ, ಉಯ್ಯಪ್ಪೋಕಲ್ ಅಲ್ಲಾಲ್–ಉಜ್ಜೀವಿಸಬೇಕಲ್ಲದೆ, ಇಲ್ಲೈ ಕಣ್ಡೀರ್ ಶದಿರೇ–ಬೇರೆ ಉಪಾಯವೇ (ಉಜ್ಜೀವಿಸುವ ಸಾಮರ್ಥ್ಯವೇ) ಇಲ್ಲ, ನೋಡಿರಿ.

( ಸ–ಗಾ–ರ ॥ )—

ಆಪತ್ಕಾಲಸುಹೃತ್ತಮಾ ಇತಿ ವೃಥಾ ವಿತ್ತಾದಿದಾನೈರ್ವಶೇ
ಯೇ ಯೇ ಚಾತ್ರ ಕೃತಾಸ್ತ ಏವ ಚ ಖಲಾ ಗ್ರಾಹಕಾಃ ಪ್ರಯಾನ್ತಿ ಸ್ವಯಮ್ ।
ಅಸ್ಮಾಕಂ ನ ಸಹಾಯಕಾ ಇತಿ ಪರಂ ಸತ್ಯಂ ವೃಥಾ ವರ್ಣನಂ!
ಶೀಲಂ ಶ್ರೀಮಧುರೋದ್ಭವಸ್ಯ ಶರಣಂ! ನಾಸ್ಮಾಕಮನ್ಯದ್ಭವೇತ್ ॥

ತಾ॥ ನಮ್ಮ ಕೈಯಲ್ಲಿರುವ ದ್ರವ್ಯವೆಲ್ಲಾ ನಷ್ಟವಾದಾಗ ನಮಗೆ ಆಪತ್ಕಾಲದಲ್ಲಿ ರಕ್ಷಕರಾಗುವರೆಂದು ಹೇಳಿ ದ್ರವ್ಯಾದಿಗಳಿಂದ ವಶೀಕೃತರಾದ ಬನ್ಧುಪರಿವಾರಗಳೂ ಕೂಡ ಸಿಕ್ಕಿದ್ದನ್ನು ತೆಗೆದುಕೊಂಡುಹೋಗುವ ಕ್ಷುದ್ರರಾದ ವಂಚಕರೇ ಆಗುವರು. ಅದೇ ಅವರ ಕೃತ್ಯ. ಅದನ್ನು ವರ್ಣಿಸಿ ಏನುಪ್ರಯೋಜನ? ಉತ್ತರ ಮಧುರಾಪುರಿಯಲ್ಲಿ ಅವತರಿಸಿದ ಸ್ವಾಮಿಯ ಉದಾರಗುಣಗಳನ್ನೇ ರಕ್ಷಕವೆಂದು ನಂಬಿ ನಾವು ಉಜ್ಜೀವಿಸಬೇಕಲ್ಲದೆ ಬೇರೆ ಉಪಾಯವೇ ಇಲ್ಲ. ನೋಡಿರಿ.

(೫) ಶದಿರಮೆನ್ರು ತಮ್ಮೈತ್ತಾಮೇ ಶಮ್ಮದಿತ್ತಿ ಱವೊಱಿಯಾರ್,
ಮದುರಪ್ಪೋಕಮ್ ತುಱನ್ದವರೇ ವೈಕಿ ಮುಱ್ಱಾನ್ರುಱುವರ್,
ಅದಿರ್‌ಕೊಳ್ ಶೆಯ್ಯಕ್ಕೈ ಯುತ್ತರರ್ ಮಱ
ವಡಮದುರೈಪ್ಪಿಱನ್ದಾಱ್ಕು,
ಎದಿರ್‌ಕೊಳಾಳಾಯುಯ್ಯಲಲ್ಲಾಲಿಲ್ಲೈ ಕಣ್ಡೀರಿನ್ಬಮೇ.

ಪ್ರ॥ ಶದಿರಮೆನ್ರು (ಶದುರಮ್ ಎನ್ರು)–ಸಾಮರ್ಥ್ಯವುಳ್ಳವರೆಂದು, ತಮ್ಮೈತ್ತಾಮೇ – ತಮ್ಮನ್ನು ತಾವೇ, ಶಮ್ಮಾದಿತ್ತು–ಗೌರವಿಸಿ (ಸ್ತುತಿಸಿ), ಇನ್ಮೊೞಿಯಾರ್–ಮಧುರಭಾಷಿಣಿಗಳಾದ ಸ್ತ್ರೀಜನರ, ಮದುರ ಪೋಕಮ್–ಪ್ರಿಯವಾದ ಭೋಗವನ್ನು, ತುಯ್ತ್ತವರೇ – ಪೂರ್ಣವಾಗಿ ಅನುಭವಿಸಿದವರೇ, ಪೈಕಿ – ಕಾಲಕ್ರಮೇಣ, ಮತಿೞ್ಗ್ನ್ರು – ಅವಮಾನಾದಿ ದುರವಸ್ಥೆಯನ್ನು, ಉೞುವರ್ – ಹೊಂದುವರು. ಅದಿರ್ ಕೊಳ್ – (ಲೋಕಕ್ಕೆ) ಭಯಜನಕವಾದ, ಶೆಯ್‌ಕೈ–ನಡತೆಯುಳ್ಳ, ಅಶುರರ್–ರಾಕ್ಷಸರು, ಮಙ್ಗ–ನಷ್ಟರಾಗುವಂತೆ, ವಡಮದುರೈ ಪ್ಪಿಱನ್ದಾಱ್ಕು–ಉತ್ತರಮಧುರಾಪುರಿಯಲ್ಲಿ ಹುಟ್ಟಿದ ಸ್ವಾಮಿಗೆ, ಎದಿರ್‌ಕೊಳ್–ಅಭಿಮುಖ್ಯವನ್ನು ಮಾಡುವ, ಆಳಾಯ್–ಕಿಂಕರರಾಗಿ, ಉಯ್ಯಲ್ ಅಲ್ಲಾಲ್ – ಉಜ್ಜೀವಿಸಬೇಕಲ್ಲದೆ, ಇಲ್ಲೈಕಣ್ಡೀರ್ ಇನ್ಬಮೇ – ಬೇರೆ ಆನನ್ದವೇ ಇಲ್ಲ ನೋಡಿರಿ.

( ಸ-ಗಾ-ರ ॥ )—

ಚಾತುರ್ಯಂ ಪರಮಂ ನಿಜಂ ಹಿ ಬಹುಧಾ ಸಮ್ಭಾವ್ಯ ವಾಙ್ಮಾಧುರೀ–
ಮೇವ ಸ್ತ್ರೀನಿವಹಾ ನಟನ್ತಿ ಚ ಸುಖಂ ತೈಃ ಪ್ರಾಪ್ಯ ತುಷ್ಟಾ ಅಪಿ।
ಕಾಲೇ ಹನ್ತ! ಪತನ್ತಿ ದುಃಖಜಲಧೌ ತಸ್ಮಾದ್ದುರಾತ್ಮಾಸುರ–
ಧ್ವಂಸಂ ಶ್ರೀಮಧುರೋದ್ಭವಂ ತು ಶರಣಂ ಸಮ್ಪ್ರಾಪ್ಯ ಯಾಮಸ್ಸುಖಮ್॥

ತಾ॥ ಒಳ್ಳೇ ಚಾತುರ್ಯವುಳ್ಳವರೆಂದು ತಮ್ಮನ್ನು ತಾವೇ ಪ್ರಶಂಸೆಮಾಡಿ ಮಧುರಭಾಷಿಣಿಗಳಾದ ಸ್ತ್ರೀಜನರ ಪ್ರಿಯಭೋಗವನ್ನು ಚೆನ್ನಾಗಿ ಅನುಭವಿಸಿದವರೂ ಕೂಡ ಕಾಲಕ್ರಮೇಣ (ದಾರಿದ್ರ್ಯರೋಗಾದಿಗಳಿಂದ) ಅವಮಾನಾದಿ ದುರವಸ್ಥೆಯನ್ನು ಹೊಂದುವರು. ಆದುದರಿಂದ ಅಸುರಧ್ವಂಸಕನ್ನಾಗಿ ಉತ್ತರ ಮಧುರಾಪುರಿಯಲ್ಲಿ ಹುಟ್ಟಿದ ಸ್ವಾಮಿಗೆ ಕಿಂಕರರಾಗಿ ಉಜ್ಜೀವಿಸಬೇಕಲ್ಲದೆ ನಮಗೆ ಬೇರೆ ಆನನ್ದವೇ ಇಲ್ಲ, ತಿಳಿಯಿರಿ.

(೬) ಇಲ್ಲೈಕಣ್ಡೀರಿನ್ಬಮನ್ದೋ ಉಳ್ಳದು ನಿನ್ನೈಯಾದೇ,
ತೊಲ್ಲೈಯಾರ್‌ಕಳೆತ್ತನ್ನೈವರ್ ತೋೞ್ಕೈಕ್ಕಳಿನೊಡಿನಾರ್,
ಮಲ್ಲೈಮೂದೂರ್ ವಡಮದುರೈ ಪ್ಪಿಱನ್ದವನ್
ವಣ್ಪುಕೞೇ,
ಶೊಲ್ಲಿ ಯುಯ್ಯ ಪ್ಪೋಕಿಲಲ್ಲಾಲ್ ಮಱ್ಱೊನ್ಱಿಲ್ಲೈ
ಶುರುಕ್ಕೇ.

ಪ್ರ॥ ಇನ್ಬಮ್ – ಸುಖಜೀವನವು, ಇಲ್ಲೈಕಣ್ಡೀರ್ – (ಈ ಲೋಕದಲ್ಲಿ) ಇಲ್ಲವೆಂದು ತಿಳಿಯಿರಿ. ಅನ್ದೋ–ಅಯ್ಯೋ !, ಉಳ್ಳದು–ಭಗವತ್ಸ್ವರೂಪವನ್ನು (ನಿತ್ಯನಿರತಿಶಯಾನನ್ದರೂಪಿಯಾದ ಸ್ವರೂಪವನ್ನು), ನಿನೈಯಾದೇ–ಸ್ಮರಿಸದೇ, ತೊಲ್ಲೈಯಾರ್ಕಳ್–ಪೂರ್ವಕಾಲದವರು, ಎತ್ತನೈವರ್–ಎಷ್ಟುಮಂದಿ, ತೋನ್ಱಿಕ್ಕೞಿನ್ದೊೞಿನ್ದಾರ್–ಹುಟ್ಟಿ ಸತ್ತುಹೋದವರು ! ಮಲ್ಲೈ–ಸಮ್ಪತ್ಸಂಪೂರ್ಣವಾದ, ಮೂದು–ಅನಾದಿಯಾದ, ಊರ್–ನಗರವಾದ, ವಡಮದುರೈ–ಉತ್ತರಮಧುರೆಯಲ್ಲಿ, ಪಿಱನ್ದವನ್–ಅವತರಿಸಿದ ಸ್ವಾಮಿಯ, ವಣ್ಪುಕೞೇ–ಉದಾರಗುಣವೈಭವವನ್ನೇ, ಶೊಲ್ಲಿ–ಕೀರ್ತಿಸಿ, ಉಯ್ಯಪ್ಪೋಕಿಲ್ ಅಲ್ಲಾಲ್–ಉಜ್ಜೀವಿಸಬೇಕಲ್ಲದೆ, ಮಱ್ಱು – ಬೇರೆ, ಶುರುಕ್ಕನ್ಱು ಇಲ್ಲೈ – ಸಾರಸಂಗ್ರಹವಾದುದು ಯಾವುದೂ (ಒಂದೂ) ಇಲ್ಲ.

( ಸ–ಗಾ–ರ ॥ )—

ನಾಸ್ತ್ಯೇವಾತ್ರ ಸುಖಂ ಜಗತ್ಯಹಹ! ಹಾ! ಶ್ರೀಶಸ್ಮೃತಿಂ ತಾಂ ವಿನಾ
ಯಾತಾ ಏವ ವೃಥಾ ಸ್ವಯಂ ತ್ವಗಣಿತಾ ಜಾತಾ ಮೃತಾಃ ಪ್ರಾಕ್ತನಾಃ ।
ಪೂರ್ಣಶ್ರೀಮದನಾದಿಸಿದ್ಧ–ಮಧುರಾಪುರ್ಯುದ್ಭವ–ಶ್ರೀಹರೇಃ
ಕಲ್ಯಾಣಾತ್ಮಗುಣಸ್ತುತಿರ್ಹಿ ಶರಣಂ ! ನಾನ್ಯದ್ಭವೇತ್ಸಾರತಃ ॥

ತಾ॥ ಈ ಲೋಕದಲ್ಲಿ ಸುಖಜೀವನವೇ ಇಲ್ಲವೆಂದು ತಿಳಿಯಿರಿ. ಅಯ್ಯೋ! ಭಗವನ್ತನ ನಿರತಿಶಯಾನನ್ದ ಸ್ವರೂಪವನ್ನು ಸ್ಮರಿಸದೇ ಎಷ್ಟೋಮಂದಿ ಪೂರ್ವಕಾಲದಲ್ಲೂ ಹುಟ್ಟಿ ಸತ್ತುಹೋದರು. ಆದುದರಿಂದ, ಉತ್ತರಮಧುರಾಪುರಿಯಲ್ಲಿ ಅವತರಿಸಿದ ಸ್ವಾಮಿಯ ಉದಾರಗುಣಕೀರ್ತನದಿಂದಲೇ ಉಜ್ಜೀವಿಸಬೇಕಲ್ಲದೆ ಬೇರೆ ಸಾರವಾದುದು ಯಾವುದೂ ಇಲ್ಲ.

(೭) ಮಱ್ಱೊನ್ಱಿಲ್ಲೈ ಶುರುಙ್ಗಚ್ಚೊನ್ನೋಮ್
ಮಾನಿಲತ್ತೆವ್ವುಯಿರ್ಕ್ಕುಮ್,
ಶಿಱ್ಱವೇಣ್ಡಾ ಶಿನ್ದಿಪ್ಪೇಯಮೈಯುಮ್ ಕಣ್ಡೀರ್ಕಳನ್ದೋ,
ಕುಱ್ಱಮನ್ಱಿ ಎಙ್ಗಳ್ ಪೆಱ್ಱತ್ತಾಯನ್
ವಡಮದುರೈಪ್ಪಿಱನ್ದಾನ್,
ಕುಱ್ಱಮಿಲ್ ಶೀರ್ ಕಱ್ಱು ವೈಕಲ್ ವಾೞ್ದಲ್
ಕಣ್ಡೀರ್ ಗುಣಮೇ.

ಪ್ರ|| ಮಱ್ಱೊನ್ಱಿಲ್ಲೈ – ಬೇರೆ ಒಂದೂ ಇಲ್ಲ. ಶುರುಙ್ಗ–ಸಂಗ್ರಹವಾಗಿ, ಶೊನ್ನೋಮ್–(ನಿಮಗೆ) ಹೇಳಿದೆವು. ಮಾನಿಲತ್ತು–ವಿಶಾಲವಾದ ಭೂಮಿಯಲ್ಲಿ, ಎವ್ವುಯಿರ್ಕ್ಕುಮ್ – ಎಲ್ಲಾ ಚೇತನರಿಗೂ, ಶಿಱ್ಱವೇಣ್ಡಾ – ಆಯಾಸವೇ ಬೇಕಾದುದಿಲ್ಲ. ಶಿನ್ದಿಪ್ಪೇ-ಸ್ಮರಣವೇ, ಅಮೈಯುಮ್ ಕಣ್ಡೀರ್ಕಳ್–ಸಾಕು ಎಂದು ತಿಳಿಯಿರಿ. ಅನ್ದೋ–ಅಯ್ಯೋ!, ಕುಱ್ಱಮ್ ಅನ್ಱು– ಅನರ್ಥಕರವಲ್ಲವಷ್ಟೆ (ನಾವು ಹೇಳುವುದು)! ಎಙ್ಗಳ್ ಪೆಱ್ಱತ್ತಾಯರ್ – ನಮ್ಮ ಗೋವುಗಳ ರಕ್ಷಕನಾದ, ವಡಮದುರೈ ಪ್ಪಿಱನ್ದಾನ್ – ಉತ್ತರಮಧುರೆಯಲ್ಲಿ ಅವತರಿಸಿದ ಸ್ವಾಮಿಯ, ಕುಱ್ಱಮಿಲ್ ಶೀರ್-ನಿರ್ದೋಷವಾದ ಕಲ್ಯಾಣಗುಣಗಳನ್ನು, ಕಱ್ಱು- ಅಭ್ಯಾಸ ಮಾಡಿ, ವೈಕಲ್ – ಯಾವಾಗಲೂ, ವಾೞ್ದಲ್ಗುಣಮೇ ಕಣ್ಡೀರ್–ಬಾಳುವುದು (ನಿಮಗೆ) ಶ್ರೇಯಸ್ಕರವೇಯೆಂದು ತಿಳಿಯಿರಿ.

( ಶ–ಗಾ–ರ || )—

ನಾನ್ಯದ್ವಾತಿ ಶರಣ್ಯಮಿತ್ಯಪಿ ವಯಂ ಬ್ರೂಮಸ್ಸ್ವಯಂ ಸಾರತೋ
ಯುಷ್ಮಾಕಂ ಹಿತಮೇವ! ನಾತ್ರ ಜಗತಿ ಕ್ಲೇಶಾವಕಾಶೋ ನೃಣಾಮ್ |
ನಿತ್ಯಂ ಚಿನ್ತನಮೇವ ಭಾತಿ ಫಲದಂ! ನೈವಾತ್ರ ಹಾನಿರ್ಭವೇ–
ದ್ಗೋಪಾಲಂ ಮಧುರೋದ್ಭವಂ ಗುಣನಿಧಿಂ ಸ್ತುತ್ವಾಽನಿಶಂ ಜೀವತ ||

ತಾ|| ಬೇರೆ ಸಾರವಾದುದು ಯಾವುದೂ ರಕ್ಷಕವಾಗುವುದಿಲ್ಲ. ಇದನ್ನು ನಿಮಗೆ ಹೇಳಿ ಇದೇವೆ. ಈ ವಿಶಾಲವಾದ ಭೂಮಣ್ಡಲದಲ್ಲಿ ಸಕಲ ಚೇತನರಿಗೂ ಆಯಾಸವೇ ಇಲ್ಲದೆ ಭಗವನ್ತನ ಸ್ಮರಣವೇ ಸಾಕು. ಅದೇ ರಕ್ಷಕವೆಂದು ತಿಳಿಯಿರಿ. ನಾವು ಹೇಳುವುದು ನಿಮಗೆ ಅನರ್ಥಕರವಲ್ಲವಷ್ಟೆ! ಗೋಪಾಲಕನಾದ ಉತ್ತರಮಧುರಾಪುರಿಯಲ್ಲಿ ಹುಟ್ಟಿದ ಸ್ವಾಮಿಯ ನಿರ್ದೋಷವಾದ ಕಲ್ಯಾಣ ಗುಣಗಳನ್ನು ಸಂಕೀರ್ತಿಸಿ ಯಾವಾಗಲೂ ಚೆನ್ನಾಗಿ ಬಾಳುವುದೇ ನಿಮಗೆ ಶ್ರೇಯಸ್ಕರವೆಂದು ತಿಳಿಯಿರಿ.

(೮) ವಾೞ್ದಲ್ಕಣ್ಡೀರ್ ಗುಣಮಿದನ್ದೋ ಮಾಯವನಡಿಪರವಿ,
ಪೋೞ್ದುಪೋಕ ವುಳ್ಳಕಿಱ್ಕುಮ್ ಪುನ್ಮೈಯಿಲಾದವರ್ಕ್ಕು,
ವಾೞ್ತುಣೈಯಾ ವಡಮದುರೈಪ್ಪಿಱನ್ದವನ್ ವಣ್ಪುಕೞೇ,
ವೀೞ್ತುಣೈಯಾಪ್ಪೋಮಿದನಿಲ್ ಯಾದುಮಿಲ್ಲೈ ಮಿಕ್ಕದೇ.

ಪ್ರ|| ವಾೞ್ದಲ್-ಬಾಳುವ, ಇದು ಗುಣಮ್ ಕಣ್ಡೀರ್-ಇದು (ಎಲ್ಲರಿಗೂ) ಶ್ರೇಯಸ್ಕರವೆಂದು ತಿಳಿಯಿರಿ. ಅನ್ದೋ-ಅಯ್ಯೋ! (ಈ ಬಾಳುವ ರೀತಿಯನ್ನೂ ತಿಳಿಯಲಾರಿರಿ!). ಮಾಯವರ್-ಆಶ್ಚರ್ಯಗುಣಚೇಷ್ಟಿತಗಳುಳ್ಳ ಸರ್ವೇಶ್ವರನ, ಅಡಿ-ಪಾದಗಳನ್ನು, ಪರವಿ-ಸ್ತೋತ್ರಮಾಡಿ, ಪೋೞ್ದುಪೋಕ-ಕಾಲಕ್ಷೇಪವಂ ಮಾಡಬೇಕೆಂದು, ಉಳ್ಳಕಿಲ್ಲುಮ್-ಚಿನ್ತಿಸಬಲ್ಲವರಾದ, ಪುನ್ಮೈಯಿಲಾದವರ್ಕ್ಕು-ದೋಷರಹಿತರಾದವರಿಗೆ, ವಾೞ-ಚೆನ್ನಾಗಿ ಬಾಳುವುದಕ್ಕೆ, ತುಣೈಯಾ-ಸಹಾಯಭೂತನಾಗುವುದಕ್ಕೆ, ವಡಮದುರೈಪ್ಪಿಱನ್ದವರ್-ಉತ್ತರಮಥುರೆಯಲ್ಲಿ ಹುಟ್ಟಿದ ಸ್ವಾಮಿಯ, ವಣ್‌ಪುಕೞೇ-ಉದಾರವಾದ ಕಲ್ಯಾಣಗುಣಗಳನ್ನೇ, ವೀೞ-ಆಶೆಪಟ್ಟು, ತುಣೈಯಾಪ್ಪೋಮ್ ಇದನಿಲ್-ಭೋಗಸಹಾಯವಾಗಿ ನಡೆಯುವ ಇದಕ್ಕಿಂತಲೂ, ಮಿಕ್ಕದು-ಅತಿಶಯಿತವಾದುದು, ಯಾದುಮ್ ಇಲ್ಲೈ-ಯಾವುದೂ ಇಲ್ಲ.

( ಸ-ಗಾ-ರ || )—

ಲೋಕೋಜ್ಜೀವನಮೇತದೇವ ಹಿ ವರಂ! ಸನ್ತ್ಯಕ್ತತಾಂ ಹನ್ತ! ಹಾ!
ಮಾಯಿಶ್ರೀಚರಣಸ್ತುತಿಂ ಹಿ ಕರಣಂ ಪ್ರಾಪ್ಯಾಶ್ಯನನ್ಯಾಶ್ರಯಾಃ |
ಯೇ ಯೇ ಸನ್ತಿ ಸುಹೃಚ್ಛಕಾಸ್ತಿ ಮಧುರಾಪುರ್ಯುದ್ಭವಶ್ರೀಹರಿ-
ಸ್ತೇಷಾಂ! ತದ್ಗುಣಕೀರ್ತನಾನ್ನ ಹಿ ಪರಂ ಸಜ್ಜೀವನಂ ರಕ್ಷಕಮ್ ||

ತಾ|| ಒಳ್ಳೇ ಬಾಳುವಿಕೆಯೇ ಶ್ರೇಯಸ್ಕರವೆಂದು ತಿಳಿಯಿರಿ. ಅಯ್ಯೋ! (ಇದನ್ನೂ ನೀವು ತಿಳಿಯಲಾರಿರಾ?). ಮಾಯಾಚೇಷ್ಟಿತನಾದ ಸರ್ವೇಶ್ವರನ ಚರಣಾರವಿನ್ದ ಸ್ತುತಿಯಿಂದಲೇ ಕಾಲಕ್ಷೇಪವಂ ಮಾಡಬೇಕೆಂದು ಉದ್ದೇಶಿಸಿ ಇರುವ ನಿರ್ದೋಷರಾದ ಭಕ್ತೋತ್ತಮರಿಗೆ ರಕ್ಷಕನಾಗಿ ತಾನು ಸಹಾಯಭೂತನಾಗಬೇಕೆಂದು ಉತ್ತರಮಥುರೆಯಲ್ಲಿ ಹುಟ್ಟಿದ ಸ್ವಾಮಿಯ ಕಲ್ಯಾಣಗುಣಾನುಭವಕ್ಕಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ.

(೯) ಯಾದುಮಿಲ್ಲೈ ಮಿಕ್ಕದನಿಲೆನ್ಱೆನ್ಱದು ಕರುದಿ,
ಕಾದುಶೆಯ್‌ವಾನ್ ಕೂದೈಶೆಯ್‌ದು ಕದೈಮುತ್ತು
ವಾೞ್‌ಕ್ಕೈಯುಮ್ ಪೋಮ್,
ಮಾತುಕಿಲಿನ್ ಕೊಡಿಕ್ಕೊಳ್ ಮಾಡ ವಡಮದುರೈಪ್ಪಿಱನ್ದ,
ತಾದುಶೇರ್‌ತೋಳ್ ಕಣ್ಣನಲ್ಲಾಲಿಲ್ಲೈಕಣ್ಡೀರ್ ಶರಣೇ.

ಪ್ರ|| ಅದನಿಲ್-ಅದಕ್ಕಿಂತ, ಮಿಕ್ಕು-ಅಧಿಕವಾದುದು, ಯಾದುಮ್ ಇಲ್ಲೈ-ಯಾವುದೂ ಇಲ್ಲ, ಎನ್ನೆನು - ಎಂದು ಹೇಳಿ ಹೇಳಿ, ಅದು-ಪ್ರಯೋಜನಾನ್ತರಗಳನ್ನು, ಕರುದಿ - ಅಪೇಕ್ಷಿಸಿ, ಕಾದುಶೆಯ್‌ವಾರ್ - ಕಿವಿಯನ್ನು ಬೆಳಸುವವನು, ಕೂದೈಶೆಯ್‌ದು - ಮೂಳಿಯಾಗಿ ಬಿಡುವಂತೆ, ಕಡ್ಡೈಮುತ್ತ್ಯಾವಾಳ್ಕೈಯುಮ್-ಮೊದಲು ಇದ್ದ ಐಶ್ವರ್ಯವೂ, ಪೋಮ್-ನಷ್ಟವಾಗಿ ಹೋಗುವುದು. (ಆದುದರಿಂದ) ಮಾ-ದೊಡ್ಡದಾದ, ತುಕಿಲ್-ವಸ್ತ್ರಪಟಗಳುಳ್ಳ, ಕೊಡಿಕ್ಕೊಳ್-ಧ್ವಜಗಳೊಡನೆ ಕೂಡಿದ, ಮಾಡ - ಉಪ್ಪರಿಗೆಗಳುಳ್ಳ, ವಡಮದುರೈ - ಉತ್ತರ ಮಧುರೆಯಲ್ಲಿ, ಪಿಱನ್ದ-ಹುಟ್ಟಿದ, ತಾದುಶೇರ್ - (ತುಳಸೀ ವೈಜಯನ್ತ್ಯಾದಿ) ಮಾಲಾಲಂಕೃತವಾದ, ತೋಳ್-ಭುಜಗಳುಳ್ಳ, ಕಣ್ಣನ್-ಕೃಷ್ಣನನ್ನು, ಅಲ್ಲಾಲ್-ಬಿಟ್ಟರೆ, ಶರಣ್-ರಕ್ಷಕವಸ್ತುವು, ಇಲ್ಲೈ ಕಣ್ಡೀರ್-ಇಲ್ಲವಷ್ಟೆ! ನೋಡಿರಿ.

( ಸ-ಗಾ-ರ || )—

ನಾಸ್ತ್ಯೇವಾತ್ರ ತತೋಽತಿಶಾಯಿ! ಸತತಂ ಚೈಶ್ವರ್ಯಕಾಮಾಸ್ತಥಾ
ನೀತಾ ಏವ ದರಿದ್ರತಾಂ ಕಿಲ ಯಥಾ ಶ್ರೋತ್ರಪ್ರವೃದ್ಧಾ ರತಾಃ |
ನೀಶ್ರೋತ್ರಾ ಹಿ ಭವನ್ತಿ ಹನ್ತ! ತತ ಏವಾನ್ಯನ್ನ ಕೃಷ್ಣಾತ್ಪರಂ
ತತ್ತ್ವಂ ಶ್ರೀಮಧುರಾಪುರೇ ಜನಿಜುಷೋ ಮಾಲಾಢ್ಯಬಾಹುದ್ವಯಾತ್ ||

ತಾ|| ವೃಥಾ ಆಶೆಪಟ್ಟು ಕಿವಿಯನ್ನು ಬೆಳೆಸುವವರು ಮೂಳಿಯಾಗಿ ಬಿಡುವಂತೆ, ಮೊದಲು ಇದ್ದ ಸಮ್ಪತ್ತನ್ನೂ ಹಾಳುಮಾಡಿಕೊಂಡು ಅನೇಕರು ಸನ್ತಪ್ತರಾಗುವರು. ಆದುದರಿಂದ ಮಹಾಧ್ವಜಪಟಾಲಂಕೃತ ಸೌಧಭರಿತವಾದ ಮಧುರಾಪುರಿಯಲ್ಲಿ ಹುಟ್ಟಿದ ದಿವ್ಯಮಾಲಾಲಂಕೃತ ಬಾಹುಯುಗಳವುಳ್ಳ ಕೃಷ್ಣನನ್ನು ಬಿಟ್ಟರೆ ಬೇರೆ ರಕ್ಷಕವಸ್ತುವೇ ಇಲ್ಲವಷ್ಟೆ! ನೋಡಿರಿ.

(೧೦) ಕಣ್ಣನಲ್ಲಾಲಿಲ್ಲೈ ಕಣ್ಡೀರ್ ಶರಣದು ನಿಱ್ಕವನ್ದು,
ಮಣ್ಣಿನ್ಬಾರಮ್ ನೀಕ್ಕುದಱ್ಕೇ ವಡಮದುರೈಪ್ಪಿಱನ್ದಾನ್,
ತಿಣ್ಣಮಾನುಮ್ಮುಡೈಮೈಯುಣ್ಡೇಲವನಡಿ
ಶೇರ್‍ತ್ತುಯ್ಮಿನೋ,
ಎಣ್ಣವೇಣ್ಡಾ ನುಮ್ಮದಾದುಮವನನ್ಱಿ ಮಱ್ಱಿಲ್ಲೈಯೇ.

ಪ್ರ|| ಕಣ್ಣನ್ ಅಲ್ಲಾಲ್-ಕೃಷ್ಣನನ್ನು ಹೊರತು, ಶರಣ್ ಇಲ್ಲೈ ಕಣ್ಡೀರ್-ಬೇರೆ ರಕ್ಷಕವಸ್ತುವೇ ಇಲ್ಲವೆಂದು ತಿಳಿಯಿರಿ. ಅದು ನಿಱ್ಕ-ಆ ತನ್ನ ರಕ್ಷಕತ್ವವು

ಸ್ಥಾಪಿತವಾಗುವಂತೆ ಮಾಡುವುದಕ್ಕೂ, ಮಣ್ಣಿನ್‌ಪಾರಮ್ ನೀಕ್ಕುದರ್ಕ್ಕೆ-ಭೂಭಾರವನ್ನು ಹೋಗಲಾಡಿಸುವುದಕ್ಕೂ, ವನ್ದು-(ನಾಗಪರ್ಯಂಕವನ್ನು ಬಿಟ್ಟು) ಬಂದು, ವಡಮದುರೈಪ್ಪಿರನ್ದಾನ್ - (ಆ ಕೃಷ್ಣನು) ಉತ್ತರ ಮಧುರೆಯಲ್ಲಿ ಹುಟ್ಟಿದನು. (ಆದುದರಿಂದ) ನುಮ್ ಉಡೈಮೈ - ನಿಮ್ಮ ಸ್ವತ್ತು, ಉಣ್ಡೇಲ್ - ಏನಾದರೂ ಉಂಟಾದರೆ, ಅವನ್ ಅಡಿ-ಅವನ ಪಾದಗಳಲ್ಲಿ, ತಿಣಮ್ ಆ-ದೃಢವಾಗಿ, ಶೇರ್‌ತ್ತು ಉಯ್‌ಮಿನೋ - ಸಮರ್ಪಿಸಿ ಉಜ್ಜೀವಿಸಿರಿ. ಎಣ್ಣವೇಣ್ಡಾ - ಈ ವಿಷಯದಲ್ಲಿ ವಿಚಾರಮಾಡಬೇಡಿರಿ. ನುಮ್ಮದು ಆದುಮ್-ನಿಮ್ಮ ಸಮಸ್ತ ಪದಾರ್ಥಗಳೂ, ಅವನ್ ಅನ್ರಿ-ಸರ್ವವಿಧ ಬನ್ಧುವಾದ ಅವನನ್ನು ಬಿಟ್ಟರೆ, ಮತ್ತಿಲ್ಲ ಇಲ್ಲೈಯೇ-ಬೇರೆ ಒಂದು ವಸ್ತುವೂ ಇಲ್ಲ.

( ಸ-ಗಾ-ರ ॥ )—

ಕೃಷ್ಣಾನ್ನಾಪರಮಸ್ತಿ ವಸ್ತು ಶರಣಂ! ಸ್ವಖ್ಯಾತಿ ವಿಖ್ಯಾತಯೇ
ಭೂಭಾರಾಪನಯಾಯ ಸೋಽತ್ರ ಮಧುರಾಪುರ್ಯಾಂ ಕೃತಾವಿರ್ಭವಃ ।
ತಸ್ಮಾದ್ವಸ್ತು ಯದಸ್ತಿ ವೋಽದ್ಯ ಸಕಲಂ ತತ್ಪಾದಪದ್ಮದ್ವಯೇ
ಭಕ್ತ್ಯಾ ಚಾರ್ಪಯತ ಭ್ರಮಾದಿರಹಿತಾಸ್ಸರ್ವಂ ಸ ಏವಾಸ್ತಿ ವಃ ॥

ತಾ॥ ಕೃಷ್ಣನನ್ನು ಬಿಟ್ಟರೆ ಬೇರೆ ರಕ್ಷಕವಸ್ತುವೇ ಇಲ್ಲ. ಅವನು ತನ್ನ ರಕ್ಷಕತ್ವಸ್ಥಾಪನಕ್ಕಾಗಿಯೂ ಭೂಭಾರನಾಶನಕ್ಕಾಗಿಯೂ ಬಂದು ಮಧುರಾಪುರಿಯಲ್ಲಿ ಅವತರಿಸಿದನು. ಆದುದರಿಂದ ನಿಮ್ಮ ಸ್ವತ್ತು ಏನಾದರೂ ಇದ್ದರೆ ಅವನ ಪಾದಗಳಲ್ಲಿ ಸಮರ್ಪಿಸಿ ಉಜ್ಜೀವಿಸಿರಿ, ವಿಚಾರ ಮಾಡಬೇಡಿರಿ. ಅವನನ್ನು ಬಿಟ್ಟರೆ ಯಾವ ವಸ್ತುವೂ ನಿಮಗೆ ಸೇರಿದುದು ಇಲ್ಲವೇ ಇಲ್ಲ.

(೧೧) ಆದುಮಿಲ್ಲೈ ಮಱ್ಱವನಿಲೆನ್ರದುವೇ ತುಣಿನ್ದು,
ತಾದುಶೇರ್‌ತೋಳ್ ಕಣ್ಣನೈಕ್ಕುರುಕೂರ್
ಚ್ಚಡಕೋಪನ್ ಶೊನ್ನ,
ತೀದಿಲಾದ ವೊಣ್‌ತಮಿೞ್‌ಕಳಿವೈ
ಯಾಯಿರತ್ತುಳಿಪ್ಪತ್ತುಮ್,
ಓದವಲ್ಲ ಪಿರಾಕ್ಕಳ್ ನಮ್ಮೈ
ಯಾಳುಡೈಯಾರ್‌ಕಳ್ ಪಣ್ಡೇ.

ಪ್ರ॥ ಅವನಿಲ್-ಅವನನ್ನು ಹೊರತು, ಮಱ್ಱು-ಬೇರೆ, ಆದುಮ್ ಇಲ್ಲೈ-ಯಾವುದೂ ಇಲ್ಲ, ಎನ್ರು ಆದುವೇ - ಎಂಬುವುದನ್ನೇ, ತುಣಿನ್ದು - ನಿಶ್ಚಯಿಸಿ,

ತಾಡುತೋಳ್ – ಮಾಲಾಲಂಕೃತವಾದ, ತೋಳ್–ಭುಜಗಳುಳ್ಳ, ಕಣ್ಣನೈ–ಕೃಷ್ಣನನ್ನು, ಕುರುಕೂರ್ ಶಡಕೋಪನ್–ಕುರುಕಾಪುರಿಯ ಶಠಾರಿಮುನಿಯು, ಶೊನ್ನ–ಸ್ತುತಿಸಿರಚಿಸಿದ, ತೀದುಇಲಾದ–ನಿರ್ದೋಷವಾದ, ಒಣ್‍ತಮಿಳ್‍ಕಳಿನ್–ಶ್ಲಾಘ್ಯವಾದ ದ್ರಾವಿಡಭಾಷಾತ್ಮಕವಾದ ಈ, ಆಯಿರತ್ತುಳ್–ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್ – ಈ ದಶಕವನ್ನು, ಓದವಲ್ಲ–ಅಭ್ಯಸಿಸಬಲ್ಲ, ಪಿರಾಕ್ಕಳ್–ಉಪಕಾರಕರಾದ ಮಹನೀಯರು, ಪಣ್ಡೇ–ಪೂರ್ವದಿಂದಲೇ, ನಮ್ಮೈ–ನಮ್ಮನ್ನು, ಆಳುಡೈಯಾರ್‌ಕಳ್–ಕಿಂಕರರನ್ನಾಗಿ ಮಾಡಿಕೊಂಡವರು.

( ಸ–ಗಾ–ರ ॥ )—

ತಸ್ಮಾನ್ನಾಪರಮಸ್ತಿ ಕಿಞ್ಚಿದಿತಿ ಯತ್ತನ್ನಿರ್ಣಯಾತ್ತಂ ಹರಿಂ
ಶ್ರೀಕೃಷ್ಣಂ ಕುಸುಮಸ್ರಗಞ್ಚಿತತನುಂ ಸ್ತೋತುಂ ಶಠಾರಿರ್ಮುನಿಃ ।
ದಿವ್ಯದ್ರಾವಿಡವಾಙ್ಮಯಂ ಸುರುಚಿರಂ ಸಾಹಸ್ರವಾಹಾನಧಂ !,
ತತ್ರೇದಂ ದಶಕಂ ಪಠನ್ತಿ ಭುವಿ ಯೇ ತೇಷಾಂ ಹಿ ದಾಸಾ ವಯಮ್ ॥

ತಾ॥ ಅವನನ್ನು ಹೊರತು ಬೇರೆಯಾವುದೂ ರಕ್ಷಕವೇ ಇಲ್ಲವೆಂದು ನಿಶ್ಚಯಿಸಿ, ಮಾಲಾಲಂಕೃತಭುಜಗಳುಳ್ಳ ಕೃಷ್ಣನನ್ನು ಸ್ತುತಿಸಲು ಶ್ರೀ ಶಠಾರಿಮುನಿಯು ರಚಿಸಿದ ದಿವ್ಯದ್ರಾವಿಡಭಾಷಾತ್ಮಕವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಅಭ್ಯಸಿಸಬಲ್ಲ ಮಹನೀಯರು ಪೂರ್ವದಿಂದಲೇ ನಮಗೆ ಸೇವ್ಯರಾಗಿದಾರೆ.

( ದ್ರ–ಉ–ಸಂ ॥ )—

ಆದ್ಯೇ ಚಕಾರ ನವಮೇ ಶತಕೇ ಶಠಾರಿ–
ಸ್ತಚ್ಛೇಷತಾನುಭವಸನ್ಮತಿ ಸಮ್ಮತೇನ ।
ನಿಶ್ಚಿತ್ಯ ಸರ್ವವಿಧಬನ್ಧುತಯಾ ತಮೀಶ –
ಮಾಪತ್ಸಖಂ ಪ್ರಣಮತೇತಿ ಪರೋಪದೇಶಮ್ ॥

( ದ್ರ–ಉ–ತಾ–ರ ॥ )—

ಆಪದ್ಬನ್ಧುತ್ವಕೀರ್ತ್ಯಾ ದೃಢಮತಿಜನನಾದ್ವೈತ್ಯನಾಶಾಯ ಭೂಮೌ
ಜಾತತ್ವಾದುತ್ತರಸ್ಯಾಂ ಪುರಿ ಮಧುರಪದಾಲಙ್ಕೃತಾಯಾಂ ದಯಾಬ್ಧೇಃ ।
ಬನ್ಧೋಃ ಕೃಷ್ಣಸ್ಯ ಪಾದಾಶ್ರಯಣಮಿಹ ವಿನಾ ನೋ ಸಹಾಯಃ ಪುಮರ್ಥೇಽಽ
ರಕ್ಷಾಸಾಮರ್ಥ್ಯಹಾನೇರ್ಭವಿನ ಇತಿ ಹಿತಂ ಕಾರಿಸೂನುರ್ಬಭಾಷೇ ॥

(ಈ ಪ್ರಥಮದಶಕದ ಸಾರಾಂಶ—)

ಈ ಮೊದಲನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಉತ್ತರಮಧುರಾ ಪುರೀಶ್ವರನಾದ ಶ್ರೀ ಕೃಷ್ಣನೇ ನಿರುಪಾಧಿಕಬನ್ಧುವೆಂದು ನಿರೂಪಿಸಿ, ಅವನ ಸೇವೆಯಿಂದಲೇ ಉಜ್ಜೀವಿಸಬೇಕೆಂದೂ, ಅವನನ್ನು ಬಿಟ್ಟರೆ ಬೇರೆ ಯಾವುದೂ ರಕ್ಷಕ ವಸ್ತುವೇ ಇಲ್ಲವೆಂದೂ ಅನೇಕ ಪ್ರಕಾರಗಳಿಂದ ವರ್ಣಿಸಿ, ಅವನ ಕಲ್ಯಾಣ ಗುಣಕೀರ್ತನವೇ ಸರ್ವಶ್ರೇಯಸ್ಕರವೆಂದು ನಿರ್ಣಯಿಸಿ ಇರುತ್ತಾರೆ.

——:❖:——

## ಶ್ರೀಃ

# ನವಮಶತಕದಲ್ಲಿ—ದ್ವಿತೀಯದಶಕ.

## (ಪಣ್ಡೈನಾಳಾಲೇ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಿರುಪ್ಪುಳಿಂಗುಡಿಯೆಂಬ ದಿವ್ಯಕ್ಷೇತ್ರದಲ್ಲಿರುವ ಭಗವಂತನನ್ನು ಸೇವಿಸಿ ತಮ್ಮ ಆರ್ತಿ ಪರಿಹಾರವನ್ನು ಪ್ರಾರ್ಥಿಸುತ್ತಾರೆ.)

---

(೧) ಪಣ್ಡೈನಾಳಾಲೇ ನಿನ್ ತಿರುವರುಳುಮ್ ಪಙ್ಗಯತ್ತಾಳ್
ತಿರುವರುಳುಮ್

ಕೊಣ್ಡು, ನಿನ್ಕೋಯಿಲ್ ಶೀಯ್ತ್ತು ಪ್ಪಲ್ಪಡಿಕಾಲ್
ಕುಡಿಕುಡಿವಳಿ ವನ್ದಾಳ್ಗಿಯ್ಯುಮ್,

ತೊಣ್ಡರೋರ್ಕ್ಕರುಳಿ ಚ್ಚೋದಿವಾಯ್ತ್ತಿ ಅನ್ದ
ತಾಮರೈಕ್ಕಣ್ಕಳಾಲ್ ನೋಕ್ಕಾಯ್,

ತೆಣ್ತಿರೈಪ್ಪೊರುನಲ್, ತಣ್ಪಣ್ಣೈಶೂಳ್ನ್ದ
ತಿರುಪ್ಪುಳಿಙ್ಗುಡಿಕ್ಕಿಡನ್ದಾನೇ.

ಪ್ರ॥ ತೆಣ್-ನಿರ್ಮಲವಾದ, ತಿರೈ—ಅಲೆಗಳುಳ್ಳ, ಪೊರುನಲ್-ತಾಮ್ರಪರ್ಣೀ ನದಿಯುಳ್ಳ, ತಣ್-ಶೀತಳವಾದ, ಪಣ್ಣೈ—ಸಸ್ಯಕ್ಷೇತ್ರಾದಿ ಜಲಗಳಿಂದ, ಶೂಳ್ನ್ದ-ಪರಿವೃತವಾದ, ತಿರುಪ್ಪುಳಿಙ್ಗುಡಿ – ತಿರುಪ್ಪುಳಿಂಗುಡಿಯೆಂಬ ದಿವ್ಯದೇಶದಲ್ಲಿ, ಕಿಡನ್ದಾನೇ-ಶಯನಮಾಡಿರುವವನೇ!, ನಿನ್-ನಿನ್ನ, ತಿರುವರುಳುಮ್—ಕೃಪೆಯನ್ನೂ, ಪಙ್ಗಯತ್ತಾಳ್—ಪದ್ಮವಾಸಿನಿಯಾದ ಲಕ್ಷ್ಮೀದೇವಿಯ, ತಿರುವರುಳುಮ್—ಕೃಪೆಯನ್ನೂ, ಪಣ್ಡೈನಾಳಾಲೇ – ಪೂರ್ವಕಾಲದಿಂದಲೇ, ಕೊಣ್ಡು—ಹೊಂದಿ, ನಿನ್

ಕೋಯಿಲ್-ನಿನ್ನ ದೇವಾಲಯವನ್ನು, ಶೀಯ್ದ್ತು-ಗುಡಿಸಿ ರಜ್ಜವಲ್ಲ್ಯಾದಿಗಳಿಂದ ಅಲಂಕರಿಸಿ, ಪಲ್ಪಡಿಕಾಲ್ - ಅನೇಕ ಪ್ರಕಾರಗಳಿಂದ, ಕುಡಿಕುಡಿವ್ಳಿ-ಕುಲ ಕ್ರಮದಲ್ಲಿ, ವನ್ದು-(ಸಮ್ಪ್ರದಾಯಪ್ರಕಾರ) ಬಂದು, ಆಟ್ಚೆಯ್ಯುಮ್-ಸೇವೆಯನ್ನು ಮಾಡುವ, ತೊಣ್ಡರೋರ್ಕ್ಕು-ಭಕ್ತರಾದ ನಮಗೆ, ಶೋದಿ-ಪ್ರಕಾಶವಮಾನವಾದ, ವಾಯ್-ವಕ್ತ್ರವನ್ನು, ತಿಱನ್ದು ಅರುಳಿ-ತೆರೆದು, (ಸಮಾಧಾನೋಕ್ತಿಗಳನ್ನು ಹೇಳಿ) ಉನ - ನಿನ್ನ, ತಾಮರೈಕ್ಕಣ್ಕಳಾಲ್ - ತಾವರೆಯಂತೆ ಇರುವ ಕಣ್ಣುಗಳಿಂದ, ನೋಕ್ಕಾಯ್-(ನಮ್ಮನ್ನು) ನೋಡು (ಕಟಾಕ್ಷಿಸು).

( ಶ-ಗಾ-ರ )—

ಕ್ಷೇತ್ರೈಃ ಶ್ರೀತಾಮ್ರಪರ್ಣೀ-ತಟಸಲಿಲಯುತೈರ್ಭಾಸ್ವರೇ ಶ್ರೀಪುಳಿಙ್ಗು-
ಡ್ಯಾಖ್ಯೇ ಶ್ರೀದಿವ್ಯದೇಶೇ ಶಯಿತ! ತವ ಕೃಪಾಂ ಪ್ರಾಪ್ಯ
ಲಕ್ಷ್ಮ್ಯಾಶ್ಚ ದೇವ್ಯಾಃ |
ದೇವಾಗಾರೇ ಚ ಸಮ್ಮಾರ್ಜನಮಪಿ ಸುಚಿರಾತ್ಕೈಙ್ಕರ್ಯಂ ಚ ಸರ್ವಂ
ಪ್ರಾಪ್ತಾನಾಂ ಭಕ್ತಿಭಾಜಾಂ ವದ ಕಿಮಪಿ ವಚೋಽಸ್ಮಾಕಮಾಧ್ಯೈಃ
ಕಟಾಕ್ಷೈಃ ||

ತಾ|| ನಿರ್ಮಲವಾದ ತಾಮ್ರಪರ್ಣೀ ನದಿಯಿಂದಲೂ ಸಮೃದ್ಧವಾದ ಸಸ್ಯ ಕ್ಷೇತ್ರಗಳಿಂದಲೂ ಕೂಡಿದ ತಿರುಪ್ಪುಳಿಂಗುಡಿಯಲ್ಲಿ ಶಯನಮಾಡಿರುವವನೇ!, ನಿನ್ನ ಕೃಪೆಯನ್ನೂ ಲಕ್ಷ್ಮೀದೇವಿಯ ಕೃಪೆಯನ್ನೂ ಪೂರ್ವದಿಂದಲೇ ಹೊಂದಿ, ನಿನ್ನ ದೇವಾಲಯವನ್ನು ಗುಡಿಸಿ ಅಲಂಕರಿಸಿ, ಕುಲಕ್ರಮದಲ್ಲಿ ನಿನ್ನ ಕೈಂಕರ್ಯವಂ ಮಾಡುವ ಭಕ್ತರಾದ ನಮಗೆ ಸಮಾಧಾನೋಕ್ತಿಗಳನ್ನು ಹೇಳಿ, ನಿನ್ನ ನೇತ್ರಾರವಿನ್ದಗಳಿಂದ ನಮ್ಮನ್ನು ಕಟಾಕ್ಷಿಸು.

(೨) ಕುಡಿಕ್ಕಿಡನ್ದಾಕ್ಕವೆ ಶೆಯ್ದು ನಿನ್ ತೀರ್ತ್ತವಡಿವ್ಕ್ಕ್ಕುಟ್ ಶೇವಲ್ಶೆಯ್ದು, ಉನ್ಪೊನ್
ಅಡಿಕ್ಕಡವಾದೇ ವೞಿವರುಕಿಱ್ಱ ವಡಿಯುರೋರ್ಕ್ಕರುಳಿ,
ನೀ ಯೊರುನಾಳ್
ಪಡಿಕ್ಕಳವಾಕ ನಿಮಿರ್ತ್ತ ನಿನ್ಪಾದಪಙ್ಕಯಮೇ
ತಲೈಕ್ಕಣಿಯಾಯ್,
ಕೊಡಿಕ್ಕೊಳ್ ಪೊನ್ಮದಿಳ್ಶೂೞ್ ಕುಳಿರ್ವಯಲ್ಶೋಲೈ
ತ್ತಿರುಪ್ಪುಳಿಙ್ಗುಡಿಕ್ಕಿಡನ್ದಾನೇ.

ಪ್ರ॥ ಕೊಡಿಕ್ಕೊಳ್–ತೋರಣಗಳಿಂದ ಅಲಂಕರಿಸಲ್ಪಟ್ಟ, ಪೊ ಮದಿಳ್–ಸುವರ್ಣಮಯವಾದ ಪ್ರಾಕಾರಗಳಿಂದ, ಶೂಳ್–ಪರಿವೃತವಾದ, ಕುಳಿರ್–ಶೀತಳವಾದ, ವಯಲ್–ಕ್ಷೇತ್ರಗಳನ್ನೂ, ಶೋಲೈ- ಉದ್ಯಾನಗಳನ್ನೂ ಉಳ್ಳ, ತಿರುಪ್ಪುಳಿಙ್ಗುಡಿ - ಶ್ರೀಪುಳಿಂಗುಡಿ ದಿವ್ಯದೇಶದಲ್ಲಿ, ಕಿಡನ್ದಾನೇ – ಶಯನಮಾಡಿದವನೇ, ಕುಡಿಕ್ಕಿಡನ್ದು – ಕುಲಕ್ರಮವಾಗಿ ಸೇವೆಮಾಡಲು ಬಂದು ನಿಂತು, ಆಕ್ಕಮ್ ಶೆಯ್‌ದು – ಕೈಙ್ಕರ್ಯವಂಮಾಡಿ, ತೀರ್‌ತ್ತ – ಪ್ರಯೋಜನಾನ್ತರಾಪೇಕ್ಷೆಯನ್ನು ನಿವಾರಣಮಾಡಿದ, ನಿ ಅಡಿಮೈ–ನಿನ್ನ ಕೈಙ್ಕರ್ಯಗಳಲ್ಲೇ, ಕುಱ್ಱೇವಲ್ ಶೆಯ್‌ದು–ಅನ್ತರಙ್ಗಸೇವೆಯಂ ಮಾಡಿ, ಉನ್ ಪೊನ್ನಡಿ–ನಿನ್ನ ರಮ್ಯವಾದ ಪಾದಗಳನ್ನು, ಕಡವಾದೇ–ಬಿಡದೇ, ವೞಿವರುಕಿನ್ಱ-(ಪಾರತನ್ತ್ರ್ಯದ) ಸನ್ಮಾರ್ಗದಲ್ಲಿ ನಡೆಯುತ್ತಿರುವ, ಅಡಿಯರೋರ್‌ಕ್ಕು-ದಾಸಭೂತರಾದ ನಮಗೆ, ಅರುಳಿ – ಕೃಪೆಮಾಡಿ, ನೀ–ನೀನು, ಒರುನಾಳ್–ಒಂದುದಿನ, ಪಡಿಕ್ಕು–ಭೂಮಿಗೆ, ಅಳವಾಕ–ಪ್ರಮಾಣವಾಗಿ, ನಿಮಿರ್‌ತ್ತ–ನೀಡಿ ಅಳೆದ, ನಿ–ನಿನ್ನ, ಪಾದಪಙ್ಕಯಮೇ–ಪಾದಾರವಿನ್ದವನ್ನೇ, ತಲೈಕ್ಕಣಿಯಾಯ್–ನನ್ನ ತಲೆಗೆ ಅಲಂಕಾರವಾಗುವಂತೆ ಮಾಡು.

( ಸ–ಗಾ–ರ ॥ )—

ರಮ್ಯೇ ಸೌವರ್ಣಸೌಧೈಶ್ಶ್ರಯುತ! ಶುಭಪುಳಿಙ್ಗುಡ್ಯಭಿಖ್ಯೇ ಪುರೇ ಽತ್ರ
ಕ್ಷೇತ್ರೈಃ ಕ್ಷ್ಮಾಪ್ಯಾರ್ದ್ರಸಸ್ಯೈರ್ವಯಮಖಿಲಕುಲೈಶ್ಶೇಷವೃತ್ತಿಂ ಗತಾಸ್ತೇ।
ಕೈಙ್ಕರ್ಯಂ ಚಾಪ್ಯನನ್ಯಾಸ್ತವ ಚರಣಯುಗೇ ಸಂಶ್ರಿತಾ ಏವ ದಾಸಾಃ!
ಕಾರುಣ್ಯಾತ್ತ್ವಂ ಪದಾಬ್ಜಂ ಕುರು ಶಿರಸಿ ಚ ಮೇ
ಭೂಮಿಮಾನಾಯತಂ ತೇ ॥

ತಾ॥ ಸುವರ್ಣಮಯ ಪ್ರಾಕಾರಾವೃತವಾದ ಸಸ್ಯಕ್ಷೇತ್ರೋದ್ಯಾನಪರಿವೃತವಾದ ಶ್ರೀಪುಳಿಂಗುಡಿಯಲ್ಲಿ ಶಯನಮಾಡಿರುವವನೇ! ಕುಲಕ್ರಮವಾಗಿ ಸೇವೆ ಮಾಡಲು ಬಂದು ನಿಂತು ನಿನ್ನ ಅನ್ತರಂಗ ಕೈಂಕರ್ಯಗಳನ್ನು ಮಾಡಿ ನಿನ್ನ ಪಾದಗಳನ್ನು ಬಿಡದೆ ಸನ್ಮಾರ್ಗಪ್ರವೃತ್ತರಾದ ನಮಗೆ ಕೃಪೆಮಾಡಿ, ನೀನು ಒಂದುದಿನ ಭೂಮಿಯನ್ನು ಅಳೆದ ನಿನ್ನ ಪಾದಪಙ್ಕಜವನ್ನು ನನ್ನ ತಲೆಗೆ ಅಲಂಕಾರವಾಗುವಂತೆ ಮಾಡು.

(೩) ಕಿಡನ್ದನಾಳ್ ಕಿಡನ್ದಾಯೆತ್ತನೈಕಾಲಮ್ ಕಿಡತ್ತಿ ಉನ್
ತಿರುವುಡಮ್ಬಶೈಯ
ತೊಡರ್ನ್ದು ಕುಱ್ಱೇವಲ್ ಶೆಯ್ದು
ತೊಲ್ಲಡಿಮೈವಳಿವರುಮ್ ತೊಣ್ಡರೋರ್ಕ್ಕರುಳಿ
ತಡಙ್ಗೊಳ್ ತಾಮರೈಕ್ಕಣ್ ವಿೞಿತ್ತು ನೀಯೆೞುನ್ದು ಉನ್
ತಾಮರೈಮಙ್ಗೈಯುಮ್ ನೀಯುಮ್
ಇಡಙ್ಗೊಳ್ ಮೂವುಲಕುಮ್ ತೊೞ ವಿರುನ್ದರುಳಾಯ್
ತಿರುಪ್ಪುಳಿಙ್ಗುಡಿಕ್ಕಿಡನ್ದಾನೇ.

ಪ್ರ॥ ತಿರುಪ್ಪುಳಿಙ್ಗುಡಿ – ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ, ಕಿಡನ್ದಾನೇ–ಶಯನ ಮಾಡಿರುವವನೇ!, ಕಿಡನ್ದನಾಳ್–ಶಯನಮಾಡಿದ ದಿನ ಮೊದಲು, ಕಿಡನ್ದಾಯ್–ಶಯನಮಾಡಿಯೇ ಇರುತ್ತೀಯೆ. ಉನ್–ನಿನ್ನ, ತಿರು ಉಡಮ್ಬು–ದಿವ್ಯಶರೀರವು, ಅಶೈಯ–ಚಲಿಸುವಂತೆ, ಎತ್ತನೈಕಾಲಮ್–ಇನ್ನೂ ಎಷ್ಟುಕಾಲ, ಕಿಡತ್ತಿ–ಶಯನ ಮಾಡುವೆಯೋ! ತೊಡರ್ನ್ದು–ಅನುಸರಿಸಿಹೋಗಿ, ಕುಱ್ಱೇವಲ್–ಅನ್ತರಂಗ ಕೈಂಕರ್ಯವನ್ನು, ಶೆಯ್ದು–ಮಾಡಿ, ತೊಲ್–ಅನಾದಿಸಿದ್ಧವಾದ, ಅಡಿಮೈವೞಿ–ಶೇಷತ್ವಮಾರ್ಗದಲ್ಲಿ, ವರುಮ್–ಬರುವ, ತೊಣ್ಡರೋರ್ಕ್ಕು–ದಾಸಭೂತರಾದ ನಮಗೆ, ಅರುಳಿ–ಕೃಪೆಮಾಡಿ, ತಡಮ್ಕೊಳ್–ವಿಶಾಲವಾದ, ತಾಮರೈಕ್ಕಣ್–ತಾವರೆಯಂತೆ ಇರುವ ಕಣ್ಣುಗಳನ್ನು, ವಿೞಿತ್ತು–ಚೆನ್ನಾಗಿ ತೆರೆದು, ನೀ–ನೀನು, ಎೞುನ್ದು – ಶಯನದಿಂದ ಎದ್ದು, ಉನ್ – ನಿನಗೆ ಅನುರೂಪೆಯಾದ, ತಾಮರೈ ಮಙ್ಗೈಯುಮ್–ಪದ್ಮೋದ್ಭವೆಯಾದ ಲಕ್ಷ್ಮೀದೇವಿಯೂ, ನೀಯುಮ್–ನೀನೂ, ಇಡಮ್ಕೊಳ್ ಮೂವುಲಕುಮ್ – ವಿಸ್ತೀರ್ಣವಾದ ಮೂರು ಲೋಕಗಳೂ, ತೊೞ–(ನಿನ್ನನ್ನು) ಸೇವಿಸುವಂತೆ, ಇರುನ್ದರುಳಾಯ್–ಬಿಜಯಮಾಡಿರು.

( ಸ–ಗಾ–ರ ॥ )—

ಶೇಷೇ ತ್ವಂ ದೀರ್ಘಕಾಲಾದಿಹ ಶಯನಮಿದಂ ತೇ ಕಿಯನ್ತಂ ಚ ಕಾಲಂ
ಧತ್ಸೇ ? ಶ್ರೀಮನ್ ! ಪುಳಿಙ್ಗುಡ್ಯಭಿಧಪುರಶಯಾನಾನ್ತರಙ್ಗೇ ತು ಶೇಷಾಃ ।
ನಿತ್ಯಂ ದಾಸಾ ವಯಂ ತೇ ! ಸರಸಿಜನಯನ ! ತ್ವತ್ಕೃಪಾದ್ರೈಃ
ಕಟಾಕ್ಷೈ–
ರುತ್ಥಾಯ ಶ್ರೀಸಮೇತಸ್ಸಪದಿ ಚ ಜಗತಾಂ ಸೇವ್ಯ ಏವಾಸ್ವ ಪೀಠೇ ॥

ತಾ|| ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ ಶಯನಮಾಡಿರುವವನೇ ! ನೀನು ಶಯನ ಮಾಡಿದ ದಿನ ಮೊದಲು ಇದುವರೆಗೆ ಶಯನಮಾಡಿಯೇ ಇರುತ್ತೀಯೆ. ಹೀಗೆ ಎಷ್ಟುಕಾಲ ಪರ್ಯಂತ ಶಯನಮಾಡುವೆಯೋ ? ನಿನಗೆ ಅನ್ತರಂಗ ಕೈಂಕರ್ಯವನ್ನು ಮಾಡುವ ದಾಸಭೂತರಾದ ನಮಗೆ ನೀನು ಕೃಪೆಮಾಡಿ ನಿನ್ನ ನಯನಾರವಿನ್ದ ಗಳಿಂದ ನಮ್ಮನ್ನು ಕಟಾಕ್ಷಿಸಿ, ಶಯನದಿಂದ ಎದ್ದು, ನಿನಗೆ ಅನುರೂಪೆಯಾದ ಲಕ್ಷ್ಮೀದೇವಿಯೂ ನೀನೂ ಸೇರಿ, ಮೂರುಲೋಕಗಳಿಗೂ ಸೇವ್ಯರಾಗುವಂತೆ ಬಿಜಯಮಾಡಿರಿ.

(೪) ಪುಳಿಙ್ಗುಡಿಕ್ಕಿಡನ್ದು ವರಗುಣಮಙ್ಗೈಯಿರುನ್ದು
ವೈಕುನ್ದತ್ತುಳ್ ನಿನ್ಱು,
ತೆಳಿನ್ದವೆನ್ ಶಿನ್ದೈಯಕಙ್ಕழಿಯಾದೇ
ಯೆನ್ನೈಯಾಳ್ವಾಯೆನಕ್ಕರುಳಿ,
ನಳಿರ್ನ್ದ ಶೀರುಲಕಮ್ ಮೂನ್ಱುಡನ್ ವಿಯಪ್ಪ ನಾಙ್ಗಳ್
ಕೂತ್ತಾಡಿ ನಿನ್ಱಾರ್ಪ್ಪ
ಪಳಿಙ್ಗುನೀರ್ ಮುಕಲಿನ್ ಪವಳಮ್ಪೋಲ್ ಕನಿವಾಯ್
ಶಿವಪ್ಪನೀ ಕಾಣವಾರಾಯೇ.

ಪ್ರ|| ಪುಳಿಙ್ಗುಡಿ - ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ, ಕಿಡನ್ದು - ಶಯನಮಾಡಿ, ವರಗುಣಮಙ್ಗೈ - ವರಗುಣಮಙ್ಗೈಯೆಂಬಕ್ಷೇತ್ರದಲ್ಲಿ, ಇರುನ್ದು - ಕುಳಿತು, ವೈಕುನ್ದತ್ತುಳ್-ಶ್ರೀ ವೈಕುಣ್ಠವೆಂಬ ಕ್ಷೇತ್ರದಲ್ಲಿ, ನಿನ್ಱು-ನಿಂತು, ತೆಳಿನ್ದ-ನಿರ್ಮಲ ವಾದ, ಎನ್ - ನನ್ನ, ಶಿನ್ದೈಯಕಮ್ - ಮನಸ್ಸಿನಲ್ಲಿ, ಕழಿಯಾದೇ-ಬಿಡದೇ, ಎನ್ನೈ-ನನ್ನನ್ನು, ಆಳ್ವಾಯ್-ದಾಸನನ್ನಾಗಿ ಮಾಡಿಕೊಂಡವನೇ !, ಎನಕ್ಕು- ನನಗೆ, ಅರುಳಿ-ಕೃಪೆಮಾಡಿ, ನಳಿರ್ನ್ದ - ಶೀತಳವಾದ (ಶಾನ್ತವಾದ), ಶೀರ್- (ನಿನ್ನ) ಕಲ್ಯಾಣಗುಣಗಳನ್ನು, ಉಲಕಮ್ ಮೂನ್ಱು - ಮೂರು ಲೋಕಗಳೂ, ಉಡನ್ - ಏಕಕಣ್ಠವಾಗಿ, ವಿಯಪ್ಪ - ವಿಸ್ಮಯಪಡುವಂತೆ, ನಾಙ್ಗಳ್ - ನಾವು, ಕೂತ್ತಾಡಿ-ನರ್ತನಮಾಡಿ, ನಿನ್ಱು ಆರ್ಪ್ಪ-ನಿಂತು ಆಡಮ್ಬರಮಾಡಲು, ಪಳಿಙ್ಗು- ನಿರ್ಮಲವಾದ, ನೀರ್-ಜಲವುಳ್ಳ, ಮುಕಿಲಿನ್-ಮೇಘದಲ್ಲಿ, ಪವಳಮ್ಪೋಲ್- ಹವಳದಂತೆ, ಕನಿವಾಯ್-ಬಿಂಬಫಲಸದೃಶವಾದ ಅಧರವು, ಶಿವಪ್ಪ-ಕೆಂಪಾಗಿ ಪ್ರಕಾಶಿಸುವಂತೆ, ಕಾಣ-ನಾವು ಕಂಡು ಅನುಭವಿಸುವುದಕ್ಕೆ, ನೀವಾರಾಯ್- ನೀನು ಬಾ.

( ಸ–ಗಾ–ರ ॥ )—

ಶಯ್ಯಾಂ ಪ್ರಾಪ್ತಃ ಪುಳಿಙ್ಗುಡ್ಯಭಿಹಿತನಗರೇ ಯಾಸಿ ಮಜ್ಜಿತ್ತವಾಸಿನ್ !
ನಿತ್ಯಂ ಚಾಸೀನ ಏವ ತ್ವಮಿಹ ವರಗುಣಶ್ರೀಪುರೇ ಶ್ರೀಸಮೇತಃ |
ತಿಷ್ಠನ್ ವೈಕುಣ್ಠಪುರ್ಯಾಂ! ಮಯಿ ಚ ಕರುಣಯಾ! ವಿಸ್ಮಿತಾ ವೀಕ್ಷ್ಯ ಶೀಲಂ
ಭಾವತ್ಕಂ ನೃತ್ತಸಕ್ತಾ ವಯಮಿಹ ಜಲದಾಭ್ಯೇಹಿ ಬಿಮ್ಬಾಧರ ! ತ್ವಮ್ ||

ತಾ|| ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ ಶಯನಮಾಡಿ, ವರಗುಣಮಙ್ಗೈಯೆಂಬ ಕ್ಷೇತ್ರದಲ್ಲಿ ಕುಳಿತು, ಶ್ರೀ ವೈಕುಣ್ಠವೆಂಬ ಕ್ಷೇತ್ರದಲ್ಲಿ ನಿಂತು, ನಿರ್ಮಲವಾದ ನನ್ನ ಮನಸ್ಸಿನಲ್ಲಿ ಅವಿಚ್ಛಿನ್ನವಾಗಿ ವಾಸಮಾಡುತ್ತ ನನ್ನನ್ನು ದಾಸನನ್ನಾಗಿ ಮಾಡಿಕೊಂಡವನೇ! ನಿನ್ನ ಕಲ್ಯಾಣಗುಣಗಳನ್ನು ಅನುಭವಿಸಿ ಮೂರು ಲೋಕಗಳೂ ವಿಸ್ಮಯಪಡುವಂತೆ, ನಾವು ನರ್ತನಮಾಡಿ ನಿಂತು ಆಡಮ್ಬರಮಾಡಲು, ನೀನು ನೀಲಮೇಘದಂತೆ ಪ್ರಕಾಶಿಸುತ್ತ ನಿನ್ನ ಬಿಂಬಾಧರವು ಹವಳದಂತೆ ಕೆಂಪಾಗಿ ಪ್ರಕಾಶಿಸುತ್ತಿರಲು, ನಾವು ಕಂಡು ಅನುಭವಿಸುವುದಕ್ಕೆ ನೀನು ನಮ್ಮ ಸಮೀಪಕ್ಕೆ ಬಾ.

(೨೨) ಪವಳಮ್ಪೋಲ್ ಕನಿವಾಯ್ ಶಿವಪ್ಪ ನೀಕಾಣವೇನ್ದು
ನಿನ್ ಪನ್ನಿಲಾಮುತ್ತಮ್,
ತವಳ್ಕದಿರ್ ಮುಱುವಲ್ಶೆಯ್ದು ನಿನ್ತಿರುಕ್ಕಣ್
ತಾಮರೈ.ತ್ತಯಙ್ಗ ನಿನ್ದರುಳಾಯ್,
ಪವಳ ನನ್ ಪಡರ್ಕ್ಕೀೞ್ ಚ್ಚಙ್ಗುತ್ತುಪೊರುನಲ್ ತಣ್
ತಿರುಪ್ಪುಳಿಙ್ಗುಡಿಕ್ಕಿಡನ್ದಾಯ್,
ಕವಳಮಾಕಳಿಱ್ಱಿಡರ್ ಕೆಡತ್ತಡತ್ತುಕ್ಕಾಯ್ ಶಿನ–
ಪ್ಪುಱವೈ ಯೂರ್ನ್ದಾನೇ.

ಪ್ರ|| ಪವಳ – ಹವಳದ, ನನ್ಪಡರ್ಕೀೞ್ – ಚೆನ್ನಾಗಿ ಹರಡಿಕೊಂಡಿರುವ ಲತೆಗಳ ಕೆಳಗೆ, ಶಙ್ಗು ಉತ್ತು–ಶಙ್ಖಗಳು ಸೇರಿಕೊಂಡಿರುವ, ಪೊರುನಲ್–ತಾಮ್ರಪರ್ಣೀ ನದಿಯುಳ್ಳ, ತಣ್–ಶೀತಳವಾದ, ತಿರುಪ್ಪುಳಿಙ್ಗುಡಿ–ಶ್ರೀಪುಳಿಙ್ಗುಡಿಕ್ಷೇತ್ರದಲ್ಲಿ, ಕಿಡನ್ದಾಯ್–ಶಯನಮಾಡಿದವನಾಗಿ, ಕವಳಮ್–(ಮೊಸಳೆಗೆ) ಕಬಳವಾಗಿರುವ, ಮಾಕಳಿಱ್ಱಿನ್–ಮಹಾಗಜೇನ್ದ್ರನ, ಇಡರ್ ಕೆಡ–ದುಃಖವು ತೀರುವಂತೆ, ತಡತ್ತು–ಆ ತಟಾಕದಲ್ಲಿ, ಕಾಯ್ಶಿನಮ್–(ವಿರೋಧಿ ನಿರಸನದಲ್ಲಿ) ತೀವ್ರಕೋಪವುಳ್ಳ, ಪಱವೈ–ಗರುಡನನ್ನು, ಊರ್ನ್ದಾನೇ–ಹತ್ತಿ ನಡೆಸಿದವನೇ!, ಪವಳಮ್

ಪೋಲ್-ಹವಳದಂತೆ ಇರುವ, ಕನಿವಾಯ್ – ಬಿಂಬಾಧರವು, ಶಿವಪ್ಪ-ಕೆಂಪಾಗಿ ತೋರಲು, ನಿ-ನಿನ್ನ, ಪಲ್‌ನಿಲಾ-ಹಲ್ಲುಗಳ ಕಾನ್ತಿ ಚನ್ದ್ರಿಕೆಯು, ಮುತ್ತಮ್-ಅಂಗಳಕ್ಕಿಂತ, ಕದಿರ್-ಪ್ರಕಾಶವನ್ನು, ತವಪ್ಪು-ಉಳ್ಳದುದಾಗಿ ತೋರುವಂತೆ, ಮುಱುವಲ್‌ಶೆಯ್‌ದು-ಮನ್ದಹಾಸವನ್ನು ಮಾಡಿ, ಕಾಣ-(ನಾನು) ಕಾಣುವಂತೆ, ನೀವನ್ದು – ನೀನು ಬಂದು, ನಿ ತಿರುಕ್ಕಣ್ – ನಿನ್ನ ರಮ್ಯವಾದ ನೇತ್ರಗಳೆಂಬ, ತಾಮರೈ-ತಾವರೆಪುಷ್ಪಗಳು, ತಯಙ್ಗ – ಪ್ರಕಾಶಿಸುವಂತೆ, ನಿನ್ಱರುಳಾಯ್ – (ಪ್ರೀತಿಯೊಡನೆ) ನಿಂತಿರು.

( ಸ-ಗಾ-ರ || )—

ರಮ್ಯಶ್ರೀತಾಮ್ರಪರ್ಣೀತಟಭುವಿ ಚ ಪುಳಿಙ್ಗುಡ್ಯಭಿಖ್ಯೇ ಶಯಾನ!
ಶ್ರೀಶ! ತ್ವಂ ತಾರ್ಕ್ಷ್ಯವಾಹಸ್ಸಪದಿ ಕರುಣಯಾಽಭೂರ್ಗಜಸ್ಯಾರ್ತಿಹನ್ತಾ |
ಜ್ಯೋತ್ಸ್ನಾಮುಕ್ತಾಭಮನ್ದಸ್ಮಿತ! ಶುಚಿರದನ! ತ್ವಂ ಪ್ರವಾಳಾಧರೋಽಸಿ !
ಪ್ರೇಮ್ಣಾ ಮಾಮಭ್ಯುಪೈಹಿ ಸ್ವನಯನಯುಗಳಾಮ್ಭೋಜಭಾಸ್ವದ್ವಿಕಾಸೈಃ ||

ತಾ|| ಹವಳದ ಲತೆಗಳಕೆಳಗೆ ಶಙ್ಖಗಳು ಸೇರಿಕೊಂಡಿರುವ ತಾಮ್ರಪರ್ಣೀ ನದಿಯುಳ್ಳ ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ ಶಯನಮಾಡಿದವನೇ! ಗಜೇನ್ದ್ರನ ದುಃಖವನ್ನು ಗರುಡಾರೂಢನಾಗಿಹೋಗಿ ಪರಿಹರಿಸಿದವನೇ! ಹವಳದಂತೆ ಇರುವ ನಿನ್ನ ಬಿಂಬಾಧರವೂ ಚನ್ದ್ರಿಕೆಯಂತೆ ಇರುವ ನಿನ್ನ ಮನ್ದಹಾಸವೂ ಚೆನ್ನಾಗಿ ಕಾಣುವಂತೆ ನೀನು ಬಂದು ನಿನ್ನ ನೇತ್ರಾರವಿನ್ದಗಳಿಂದ ನಮ್ಮನ್ನು ಕಟಾಕ್ಷಿಸುತ್ತ ನಿಂತಿರು.

(೬) ಕಾಯಶಿನಪ್ಪುಳ್ಳೈ ಯೂರ್‌ನ್ದು ಪೊನ್ಮಲೈಯಿನ್
ಮಿಸೈಕ್ಕಾರ್ಮುಕಿಲ್‌ಪೋಲ,
ಮಾಶಿನಮಾಲಿ ಮಾಲಿಮಾನ್ ಶುಙ್ಗವರ್ ಪಡಕ್ಕನನ್ಱು ಮುನ್ ನಿನ್ಱ,
ಕಾಯ್‌ಶಿನವೇನ್ದೇ ಕದಿರ್‌ಮುಡಿಯಾನೇ
ಕಲಿವಯಲ್‌ತಿರುಪ್ಪುಳಿಙ್ಗುಡಿಯಾಯ್,
ಕಾಯ್‌ಶಿನವಾೞಿ ಶಙ್ಗುವಾಳ್ ವಿಲ್ ತ್ತಣ್ಡೇನ್ದಿ
ಯೆಮ್ಮಿಡರ್ ಕಡಿವಾನೇ.

ಪ್ರ|| ಪೊನ್ಮಲೈಯಿನ್ ಮಿಸೈ-ಸುವರ್ಣಮಯವಾದ ಮೇರುಪರ್ವತದ ಮೇಲೆ ಇರುವ, ಕಾರ್‌ಮುಕಿಲ್ ಪೋಲ-ಕಾಳಮೇಘದಂತೆ, ಕಾಯ್‌ಶಿನ-ತೀವ್ರಕೋಪವುಳ್ಳ, ಪುಳ್ಳೈ-ಗರುಡನನ್ನು, ಊರ್‌ನ್ದು-ನಡೆಸಿಕೊಂಡು, ಕಾಯ್‌ಶಿನ-ತೀವ್ರಕೋಪವುಳ್ಳ, ಆೞಿ ಶಙ್ಗುವಾಳ್ ವಿಲ್‌ತಣ್ಡು—ಚಕ್ರ-ಶಂಖ-ಖಡ್ಗ-

ಧನುರ್ಗದೆಗಳನ್ನು, ಏನ್ದಿ-ಧರಿಸಿಕೊಂಡು, ಮಾಶಿನ-ಮಹಾಕೋಪವುಳ್ಳ, ಮಾಲಿ-ಮಾಲಿ, ಮಾ ಮಾಲಿ-ದೊಡ್ಡವನಾದ ಸುಮಾಲಿ, ಎನ್ಱು-ಎಂದು ಪ್ರಸಿದ್ಧರಾದ, ಅವರ್-ಆ ಅಸುರರು, ಅಙ್ಗ- ಆ ಯುದ್ಧಭೂಮಿಯಲ್ಲಿ, ಪಡ-ನಾಶಹೊಂದುವಂತೆ, ಶಿನನ್ಱು-ಕೋಪಾವಿಷ್ಟನಾಗಿ, ಮುನ್ ನಿನ್ಱ-(ಶತ್ರುಗಳ) ಮುಂದೆ ನಿಂತ, ಕಾಯ್ಶಿನ-ಉಗ್ರಕೋಪವುಳ್ಳ, ವೇನ್ದೇ-ಸ್ವಾಮಿಯೇ!, ಕದಿರ್-ತೇಜೋಮಯವಾದ, ಮುಡಿಯಾನೇ-ಕಿರೀಟವುಳ್ಳವನೇ!, ಕಲಿ-ಸಮೃದ್ಧವಾದ, ವಯಲ್-ಸಸ್ಯಕ್ಷೇತ್ರಗಳುಳ್ಳ, ತಿರುಪ್ಪುಳಿಙ್ಗುಡಿಯಾಯ್ -- ಶ್ರೀ ಪುಳಿಂಗುಡಿಯೆಂಬ ದಿವ್ಯದೇಶದಲ್ಲಿ ಇರುವವನೇ!, ಎಮ್ ಇಡರ್ ಕಡಿವಾನೇ-ನಮ್ಮ ದುಃಖವನ್ನು ಧ್ವಂಸಮಾಡುವವನೇ!

( ಸ-ಗಾ-ರ || )—

ಸೌವರ್ಣಾದ್ರೌ ಮಹಾಮೇಘವದಯಮಭೂಸ್ತ್ವಂ ಹಿ
ತಾರ್ಕ್ಷ್ಯಾಧಿರೂಢಃ
ಸ್ವಾಮಿನ್ ಶ್ರೀಶಙ್ಖಚಕ್ರಾದ್ಯಸಿ-ಸಹಿತ-ಗದಾ-ಶಾರ್ಙ್ಗಧಾರೀ ಸುಮೌಳಿಃ |
ಕ್ರೂರಂ ಮಾಲೀ ಸುಮಾಲೀತ್ಯಭಿಹಿತಮಸುರದ್ವನ್ದ್ವಮಾಜೌ ನಿಹತ್ಯ
ಧ್ವಂಸೀ ರೋಷಾದ್ರಿಪೂಣಾಂ! ವಿಪದುಪಶಮನೋ ನಃ ಪುಳಿಙ್ಗುಡ್ಯಧೀಶಃ||

ತಾ|| ಸ್ವರ್ಣಮಯವಾದ ಮೇರುಪರ್ವತದಮೇಲೆ ಇರುವ ಕಾಳಮೇಘದಂತೆ ಪ್ರಕಾಶಿಸುತ್ತ, ಗರುಡಾರೂಢನಾಗಿ, ಶಂಖ ಚಕ್ರ ಗದಾ ಖಡ್ಗ ಶಾರ್ಙ್ಗಧರನಾಗಿ, ಮಾಲಿ ಸುಮಾಲಿಯೆಂಬ ಅಸುರರನ್ನು ಯುದ್ಧದಲ್ಲಿ ರೋಷಾವಿಷ್ಟನಾಗಿ ಕೊಂದ ತೇಜೋಮಯ ಕಿರೀಟಧಾರಿಯಾದ ಸ್ವಾಮಿಯೇ! ಸಮೃದ್ಧವಾದ ಸಸ್ಯಕ್ಷೇತ್ರಗಳುಳ್ಳ ತಿರುಪ್ಪುಳಿಂಗುಡಿಯಲ್ಲಿ ಇರುವವನೇ! ನಮ್ಮ ದುಃಖವನ್ನು ಧ್ವಂಸಮಾಡುವವನೇ! (ನಿನ್ನ ಕೃಪಾಕಟಾಕ್ಷವು ನಮಗೆ ಉಂಟಾಗಲಿ!)

(೨) ಎಮ್ಮಿಡರ್‌ಕಡಿನ್ದಿಙ್ಗೆನ್ನೈ ಯಾಳ್ವಾನೇ ಯೆಮ್ಮೈಯವರ್
ತಮಕ್ಕುಮಾಙ್ಗನ್ನೈಯಾಯ್,
ಶೆಮ್ಮಡಲ್ ಮಲರುಮ್ ತಾಮರೈಪ್ಪೞನತ್ತಾಣ್
ತಿರುಪ್ಪುಳಿಙ್ಗುಡಿಕ್ಕಿಡನ್ದಾಯ್,
ನಮ್ಮುಡೈಯಡಿಯರ್ ಕವ್ವೈ ಕಣ್ಡುಕನ್ದು
ನಾಙ್ಕಳಿತ್ತುಳ್ಳನಲಙ್ಕಾಣ,
ಇಮ್ಮಡವುಲಕರ್ ಕಾಣ ನೀ ಯೊರುನಾಳಿರುನ್ದಿಡಾ-
ಯೆಙ್ಗಳ್ ಕಣ್ಮುಕಪ್ಪೇ.

ಪ್ರ॥ ಎಮ್-ನಮ್ಮ, ಇಡರ್-ದುಃಖಗಳನ್ನು, ಕಡಿನ್ದು - ಧ್ವಂಸಮಾಡಿ, ಇಙ್ಗ-ಇಲ್ಲಿ, ಎನ್ನೈ-ನನ್ನನ್ನು, ಆಳ್ವಾನೇ-ಆಳುವವನೇ, ಇಮೈಯವರ್ ತಮಕ್ಕುಮ್-ದೇವತೆಗಳಿಗೂ, ಅಙ್ಗ-ಅಲ್ಲಿ, ಅನ್ನೈಯಾಯ್ - ರಕ್ಷಕನಾಗಿರುವವನೇ, ಶೆವ್-ಕೆಂಪಾದ, ಮಡಲ್-ಮೊಗ್ಗುಗಳು, ಮಲರುಮ್-ವಿಕಸಿಸುವ, ತಾಮರೈ-ತಾವರೆಪುಷ್ಪಗಳುಳ್ಳ, ಪೞನಮ್ - ಜಲಪ್ರದೇಶಗಳುಳ್ಳ, ತಣ್-ಶೀತಳವಾದ, ತಿರುಪ್ಪುಳಿಙ್ಗುಡಿ-ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ, ಕಿಡನ್ದಾಯ್ - ಶಯನಮಾಡಿರುವವನೇ!, ನಮ್ಮುಡೈ-ನಮ್ಮ, ಅಡಿಯರ್-ನಿನ್ನ ಭಕ್ತರಾದ ಸೂರಿವರ್ಯರ, ಕವ್ವೈ-ಸಂಭ್ರಮಕೋಲಾಹಲವನ್ನು, ಕಣ್ಡು-ನೋಡಿ, ನಾಮ್ - ನಾವು, ಉಕನ್ದು-ಪ್ರೀತಿಯೊಡನೆ, ಕಳಿತ್ತು-ಆನನ್ದಿಸಿ, ಉಳಮ್ - ಮನಸ್ಸಿನಲ್ಲಿ, ನಲಮ್‌ಕೂರ-ಪ್ರೇಮವೃತ್ತಿಯುಳ್ಳವರಾಗುವಂತೆ, ಮಡ ಇವ್ವುಲಕರ್ - ಮನ್ದಮತಿಗಳಾದ ಈ ಲೋಕದವರು, ಕಾಣ - ಕಾಣುವಂತೆ, ನೀ-ನೀನು, ಒರುನಾಳ್ - ಒಂದುದಿನವಾದರೂ, ಎಙ್ಗಳ್ ಕಣ್ ಮುಕಪ್ಪೇ-ನಮ್ಮ ಕಣ್ಣುಗಳ ಮುಂದೆ, ಇರುನ್ದಿಡಾಯ್-ಬಂದು ಇರಬೇಕು.

( ಸ-ಗಾ-ರ ॥ )—

ಅಸ್ಮಾಕಂ ದುಃಖಹನ್ತಾ ತ್ವಮಿಹ! ದಿವಿಷದಾಂ ತತ್ರ ಸಂರಕ್ಷಕೋಽಸಿ
ಶ್ರೀಮನ್! ಮನ್ನಾಥ! ಶೇಷೇ ಸರಸಿಜರುಚಿರೇ ಶ್ರೀಪುಳಿಙ್ಗುಡ್ಯಭಿಖ್ಯೇ ।
ಕ್ಷೇತ್ರೇ ಭಕ್ತೋತ್ತಮಾನಾಮಿಹ ಭುವಿ ಮಹಿತಾನನ್ದಕೋಲಾಹಲೈರ್ನಃ
ಸಂಸೇವ್ಯೋ ಲೋಕದೃಶ್ಯೋ ಭವ ನಯನಪಥೇ ಜಾತು ಚಾಸ್ಮಾಕಮೀಶ!॥

ತಾ॥ ನಮ್ಮ ದುಃಖವನ್ನು ಧ್ವಂಸಮಾಡಿ ನಮ್ಮನ್ನು ಆಳುವವನೇ! ದೇವತೆಗಳಿಗೆ ರಕ್ಷಕನಾದ ಸ್ವಾಮಿಯೇ! ಕಮಲಭರಿತ ಜಲಪ್ರದೇಶಗಳುಳ್ಳ ತಿರುಪ್ಪುಳಿಂಗುಡಿಯಲ್ಲಿ ಶಯನಮಾಡಿರುವವನೇ! ನಿನ್ನ ಭಕ್ತರಾದ ಸೂರಿವರ್ಯರ ಸಂಭ್ರಮವನ್ನು ನೋಡಿ ನಾವು ಆನನ್ದಿಸಿ ಮನಸ್ಸಿನಲ್ಲಿ ಪ್ರೇಮಪರವಶರಾಗುವಂತೆ, ಮನ್ದಮತಿಗಳಾದ ಈ ಲೋಕದವರು ಕಾಣುವಂತೆ, ನೀನು ಒಂದುದಿನ ನಮ್ಮ ಕಣ್ಣುಗಳ ಮುಂದೆ ಬಂದು ನಿಂತಿರಬೇಕು.

(೮) ಎಙ್ಗಳ್‌ಕಣ್ಮುಕಪ್ಪೇ ಯುಲಕರ್‌ಕಳೆಲ್ಲಾಮಿಣೈ
ಯಡಿತೊೞುದೆೞುದಿಱೈಞ್ಜಿ,
ತಙ್ಗಳನ್ಬಾರತ್ತಮದು ಶೊಲ್‌ವಲತ್ತಾಲ್
ತಲೈತ್ತಲೈಚ್ಚಿಱನ್ದು ಪೂಶಿಪ್ಪ,
ತಿಙ್ಗಳ್‌ಶೇರ್ ಮಾಡ ತ್ತಿರುಪ್ಪುಳಿಙ್ಗುಡಿಯಾಯ್
ತಿರುವೈಕುನ್ದತ್ತುಳ್ಳಾಯ್ ತೇವಾ,
ಇಙ್ಗಣ್‌ಮಾಞಾಲತ್ತಿದನುಳುಮೊರುನಾಳಿರುನ್ದಿಡಾಯ್
ವೀಱ್ಱಿಡಙ್ಗೊಣ್ಡೇ.

ಪ್ರ|| ತಿಙ್ಗಳ್-ಚನ್ದ್ರನು, ಶೇರ್ - ಸೇರುವಂತೆ, ಮಾಡ-(ಉನ್ನತವಾದ) ಉಪ್ಪರಿಗೆಗಳುಳ್ಳ, ತಿರುಪ್ಪುಳಿಙ್ಗುಡಿಯಾಯ್-ಶ್ರೀಪುಳಿಂಗುಡಿಕ್ಷೇತ್ರದಲ್ಲಿರುವವನೇ!, ತಿರುವೈಕುನ್ದತ್ತು-ಶ್ರೀ ವೈಕುಣ್ಠದಲ್ಲಿ, ಉಳ್ಳಾಯ್ - ಇರುವವನೇ!, ತೇವಾ - ಈ ಸೌಲಭ್ಯವುಳ್ಳತೇಜಸ್ವಿಯೇ!, ಎಙ್ಗಳ್ ಕಣ್ ಮುಕಪ್ಪೇ-ನಮ್ಮ ಕಣ್ಣು ಮುಂದೆ, ಉಲಕರ್ ಕಳ್ - ಈ ಲೋಕವಾಸಿಗಳು, ಎಲ್ಲಾಮ್ -ಎಲ್ಲರೂ, ಅಡಿ ಇಣೈ-ನಿನ್ನ ಪಾದಯುಗಳವನ್ನು, ತೊೞುದು - ನಮಸ್ಕರಿಸಿ, ಎೞುದು - ಎದ್ದು, ಇಱೈಞ್ಜಿ-ಪ್ರಾರ್ಥಿಸಿ, ತಙ್ಗಳ್-ತಮ್ಮ, ಅನ್ಬು - ಭಕ್ತಿಯು, ಆರ - ಪೂರ್ಣವಾಗಿರುವಂತೆ, ತಮದು-ತಮ್ಮ, ಶೊಲ್‌ವಲತ್ತಾಲ್ - ಸೂಕ್ತಿಗಳಿಂದ, ತಲೈತ್ತಲೈಚ್ಚಿಱನ್ದು - ಒಬ್ಬರಮೇಲೆ ಒಬ್ಬರು ಬಿದ್ದು (ನಾನು ನಾನು ಎಂದು ಮುಂದೆಬಂದು), ಪೂಶಿಪ್ಪ-ಪೂಜಿಸುವಂತೆ, ಇವಗ್ ಕಣ್-ಈ ವಿಶಾಲವಾದ, ಮಾಞಾಲತ್ತು-ಮಹಾಪೃಥಿವಿಯಲ್ಲಿ, ಇದನುಳುಮ್-ಈ ಕ್ಷೇತ್ರದಲ್ಲೂ, ವೀಱ್ಱಿಡಙ್ಗೊಣ್ಡು-ಬಿಜಯಮಾಡಿರುವಂತೆ, ಒರುನಾಳ್-ಒಂದುದಿನ, ಇರುನ್ದಿಡಾಯ್-ಬಂದು ಇರು.

( ಸ-ಗಾ-ರ || )—

ಚನ್ದ್ರಾವಾಸ್ಯೈಶ್ಚ ಸೌಧೈರ್ವಿಲಸತಿ ಮಹತೇ ಶ್ರೀಪುಳಿಙ್ಗುಡ್ಯಭಿಖ್ಯೇ
ಕ್ಷೇತ್ರೇ ವೈಕುಣ್ಠಪುರ್ಯಾಮಪಿ ಕೃತವಸತೇ! ದೇವ! ಲೋಕಾ ಯಥಾ ತ್ವಾಮ್|
ಪಾದಾವ್ಯೋಜಪ್ರಣಾಮೈರಸಕೃದುಪರಿ ಚೋತ್ಥಾನ-ಸಂಪ್ರಾರ್ಥನಾರ್ಚಾ-
ಸ್ತೋತ್ರಾದ್ಯೈಸ್ಸಂಶ್ರಿತಾಸ್ಸ್ಯುಸ್ತ್ವಹಮಹಮಿಕಯಾ ತ್ವಂ ತಥಾ
ಸ್ಯಾಶ್ಚ ದೃಶ್ಯಃ ||

ತಾ|| ಚನ್ದ್ರನು ಪ್ರವೇಶಿಸಿ ಸಂಚರಿಸುವಂತೆ ಉನ್ನತವಾದ ಉಪ್ಪರಿಗೆಗಳುಳ್ಳ ತಿರುಪ್ಪುಳಿಂಗುಡಿಯಲ್ಲಿ ಇರುವವನೇ! ಶ್ರೀ ವೈಕುಣ್ಠಕ್ಷೇತ್ರವಾಸಿಯಾದವನೇ! ದೇವದೇವನೇ! ನಮ್ಮ ಕಣ್ಣುಮುಂದೆ ಈ ಲೋಕವಾಸಿಗಳೆಲ್ಲರೂ ನಿನ್ನ ಪಾದಯುಗಳವನ್ನು ನಮಸ್ಕರಿಸಿ ಎದ್ದು ಪ್ರಾರ್ಥಿಸಿ, ತಮ್ಮ ಭಕ್ತಿಯು ಪರಿಪೂರ್ಣವಾಗಿರುಂತೆ ತಮ್ಮ ಸೂಕ್ತಿಗಳಿಂದ ಒಬ್ಬರಮೇಲೆ ಒಬ್ಬರು ಬಂದು ನಿನ್ನನ್ನು ಪೂಜಿಸುವಂತೆ, ನೀನು ಈ ಮಹಾಪೃಥಿವಿಯಲ್ಲಿ ಈ ಕ್ಷೇತ್ರದಲ್ಲೂ ಒಂದು ದಿನ ಬಂದು ಇರು.

(೯) ವೀಳ್ ಳಿಡಬಿ-ಝ್ಣ್ಣು ವಿಯರ್ಕೊಳ್
ಮಾಞಾಲತ್ತಿದನುಳುಮಿರುನ್ದಿಡಾಯ್, ಅಡಿಯೋಮ್
ಪೋಳ್ ಳಿಯೋವಾದೇ ಕಣ್ಣಿಣೈಕುಳಿರ
ಪ್ಪುದುಮಲರಾಕತ್ತೈ ಪ್ಪರುಕ,
ಶೇಳ್ ಳಿಳವಾಳೈ ಶೆನ್ನೆಲೂಡುಕಳುಮ್ ಶೆಱುಮ್ ಪಣೈ
ತ್ತಿರುಪ್ಪುಳಿಙ್ಗುಡಿಯಾಯ್,
ಕೂಳ್ ಱುವಾಯ ಶುರರ್ ಕುಲಮುದಲರಿನ್ದ
ಕೊಡುವಿನೈಪ್ಪಡೈಕಳ್ ವಲ್ಲಾನೇ.

ಪ್ರ|| ಶೇಱ್ಱು ಇಳ-ಕೆಸರಿನಲ್ಲಿರುವ ಚಿಕ್ಕಚಿಕ್ಕದಾದ, ವಾಳೈ - ಮೀನುಗಳು, ಶೆನ್ನೆಲೂಡು-ಕೆಂಪುಬತ್ತದಪೈರಿನ ನಡುವೆ, ಉಕಳುಮ್-ಕುಣಿದಾಡುವ, ಶೆಱುಮ್-ಸಮೃದ್ಧವಾದ, ಪಣೈ - ನೀರಿನ ಪ್ರದೇಶಗಳುಳ್ಳ, ತಿರುಪ್ಪುಳಿಙ್ಗುಡಿಯಾಯ್ - ಶ್ರೀ ಪುಳಿಂಗುಡಿಕ್ಷೇತ್ರದಲ್ಲಿ ಇರುವವನೇ!, ಕೂಱ್ಱುಮಾಯ್ - (ವಿರೋಧಿಗಳಿಗೆ) ಯಮನಾಗಿ, ಅಶುರರ್‌ಕುಲಮ್-ರಾಕ್ಷಸಕುಲವನ್ನು, ಮುದಲ್ - ಮೂಲಪರ್ಯನ್ತವಾಗಿ, ಅರಿನ್ದ-ಕತ್ತರಿಸಿದ, ಕೊಡುವಿನೈ ಪಡೈಕಳ್-ಕ್ರೂರಕೃತ್ಯಗಳುಳ್ಳ ಆಯುಧಗಳನ್ನು, ವಲ್ಲಾನೇ - ವಶೀಕರಿಸಿ ಪ್ರಯೋಗಿಸುವವನೇ, ಅಡಿಯೋಮ್ -ದಾಸಭೂತರಾದ ನಾವು, ಪೋಱ್ಱಿ-ಮಂಗಳಾಶಾಸನಮಾಡಿ, ಓವಾದೇ - ಎಡೆಬಿಡದೆ, ಕಣ್ ಇಣೈ - ನೇತ್ರದ್ವಯವೂ, ಕುಳಿರ -ಆರ್ದ್ರವಾಗಿ, ಪುದುಮಲರ್-ನೂತನಪುಷ್ಪದಂತೆ ಇರುವ, ಆಕತ್ತೈ-ನಿನ್ನ ದಿವ್ಯಶರೀರವನ್ನು, ಪರುಕ - ಅನುಭವಿಸುವಂತೆ, ವೀಱ್ಱಿಡಬಿೞ್ಣ್ಣು - (ನಿನ್ನ ಮಾಹಾತ್ಮ್ಯದೊಡನೆ) ಬಿಜಯಮಾಡಿ, ವಿಯರ್ಕೊಳ್ - ವಿಸ್ತಾರದಿಂದ ಆಶ್ಚರ್ಯಕರವಾದ, ಮಾಞಾಲತ್ತಿದನುಳುಮ್ - ಈ ಮಹಾಪೃಥಿವಿಯಲ್ಲೂ, ಇರುನ್ದಿಡಾಯ್-ಬಂದು ಇರು.

( ಸ–ಗಾ–ರ )—

ಮೀನಾವಳ್ಯುತ್ಪ್ಲುತಾಢ್ಯೇ ಸುರುಚಿರಮಹಿತ–ವ್ರೀಹಿ–ಸಸ್ಯಾವೃತೇ ಚ
ಕ್ಷೇತ್ರೇ ಶ್ರೀಮತ್ಪುಳಿಙ್ಗುಡ್ಯಭಿಹಿತನಗರೇ ರಾಕ್ಷಸಧ್ವಂಸಿಶಸ್ತ್ರಃ ।
ಭಾಸ್ವಾನಸ್ಮಾಕಮತ್ರ ಪ್ರಿಯತಮಸುತನೋ! ಮಙ್ಗಳಾಶಾಸನಾರ್ಥಂ
ದೃಶ್ಯೋಽಸ್ಮಲ್ಲೋಚನಾನಾಂ ಕೃತವಸತಿರಹೋ! ತ್ವಂ ಭವಾತ್ರೈವ
ಭೂಮ್ಯಾಮ್॥

ತಾ॥ ಸಸ್ಯಕ್ಷೇತ್ರಗಳಲ್ಲಿ ಚಿಕ್ಕ ಮೀನುಗಳು ಕೆಂಪುಬತ್ತದಪೈರಿನ ನಡುವೆ ಕುಣಿದಾಡುವಂತಹ ನೀರುಪ್ರದೇಶಗಳುಳ್ಳ ತಿರುಪ್ಪುಳಿಂಗುಡಿಯಲ್ಲಿ ಇರುವವನೇ! ಅಸುರಕುಲಮೂಲನಾಶಕನಾದ ದಿವ್ಯಾಯುಧ ಧಾರಿಯೇ! ದಾಸಭೂತರಾದ ನಾವು ನಿನ್ನನ್ನು ಸ್ತುತಿಸಿ, ನಿನ್ನ ದಿವ್ಯಶರೀರವನ್ನು ನಮ್ಮ ಕಣ್ಣುಗಳಿಂದ ನೋಡಿ ಅನುಭವಿಸುವಂತೆ ನೀನು ಬಿಜಯಮಾಡಿ ಈ ಮಹಾಪೃಥಿವಿಯಲ್ಲಿ ಬಂದು ಇರು.

(೧೦) ಕೊಡುವಿನೈಪ್ಪಡೈಕಳ್ ವಲ್ಲೈಯಾಯ್ಅಮರರ್‌ಕ್ಕಿಡರ್‌ಕೆಡ–
ಅಶುರರ್‌ಕಳ್ಕಿಡರ್‌ಶೆಯ್‌,
ಕಡುವಿನೈ ನಞ್ಜೇ ಯೆನ್ನುಡೈಯಮುದೇ ಕಲಿವಯಲ್
ತಿರುಪ್ಪುಳಿಙ್ಗುಡಿಯಾಯ್,
ವಡಿವಿಣೈಯಿಲ್ಲಾ ಮಲರ್‌ಮಕಳ್ ಮಱ್ಱೈ ನಿಲಮಕಳ್
ಪಿಡಿಕ್ಕುಮ್ ಮೆಲ್ಲಡಿಯೈ,
ಕೊಡುವಿನೈಯೇನುಮ್ ಪಿಡಿಕ್ಕ ನೀ ಯೊರುನಾಳ್
ಕೂವುದಲ್ ವರುದಲ್ ಶೆಯ್ಯಾಯೇ.

ಪ್ರ॥ ಕೊಡುವಿನೈ – ಕ್ರೂರಕೃತ್ಯಗಳುಳ್ಳ, ಪಡೈಕಳ್ – ಆಯುಧಗಳನ್ನು, ವಲ್ಲೈಯಾಯ್–ನಿಯಮಿಸುವಂತಹ ಸಮರ್ಥನಾದ, ಅಮರರ್‌ಕ್ಕು-ದೇವತೆಗಳ, ಇಡರ್‌ಕೆಡ–ದುಃಖವು ಶಾನ್ತವಾಗುವಂತೆ, ಅಶುರರ್‌ಕಳ್ಕು – ರಾಕ್ಷಸರಿಗೆ, ಇಡರ್ ಶೆಯ್–ಕ್ಲೇಶವನ್ನು ಉಂಟುಮಾಡುವ, ಕಡುವಿನೈ- ಅತಿಕ್ರೂರಕೃತ್ಯವುಳ್ಳ (ಸದ್ಯೋ ವಿನಾಶಕರವಾದ), ನಞ್ಜೇ–ವಿಷವೇ, ಎನ್ನುಡೈ ಅಮುದೇ-ನನಗೆ ಅಮೃತರೂಪನೇ, ಕಲಿ-ಸಮೃದ್ಧವಾದ, ವಯಲ್ – ಕ್ಷೇತ್ರಗಳುಳ್ಳ, ತಿರುಪ್ಪುಳಿಙ್ಗುಡಿಯಾಯ್ – ಶ್ರೀ ಪುಳಿಂಗುಡಿಯಲ್ಲಿ ಶಯನಮಾಡಿರುವವನೇ, ವಡಿವು – ಶರೀರಸೌನ್ದರ್ಯಕ್ಕೆ, ಇಣೈಯಿಲ್ಲಾ – ಸದೃಶವಿಲ್ಲದ, ಮಲರ್‌ಮಕಳ್ – ಪದ್ಮೋದ್ಭವೆಯಾದ ಲಕ್ಷ್ಮೀ

ದೇವಿಯೂ, ನಿಲಮಕಳ್-ಭೂದೇವಿಯೂ, ಪಿಡಿಕ್ಕುಮ್ - (ತಮ್ಮ ಮೃದುವಾದ ಹಸ್ತಗಳಿಂದ) ಹಿಡಿಯುವಂತಹ, ಮೆಲ್ ಅಡಿಯೈ-ಸುಕುಮಾರವಾದ ಪಾದಗಳನ್ನು, ಕೊಡುವಿನೈಯೇನುಮ್ - ಮಹಾಪಾಪಿಯಾದ ನಾನೂ, ಪಿಡಿಕ್ಕ-ಹಿಡಿಯುವಂತೆ, ನೀ-ನೀನು, ಕೂವುದಲ್-ಕೂಗಿ ಕರೆದುಕೊಳ್ಳೋಣವನ್ನೂ, ವರುದಲ್ - ಇಲ್ಲಿಗೆ ಬರೋಣವನ್ನೂ, ಒರುನಾಳ್-ಒಂದುದಿನ, ಶೆಯ್ಯಾಯ್-ಮಾಡು.

( ಸ- ಗಾ-ರ || )—

ತೀವ್ರಪ್ರಘಾತಾಯುಧಾನಾಂ ಪ್ರಭುರಮರಗಣಾನ್ ವೀತದುಃಖಾನ್ ಕರೋಷಿ
ಪ್ರಧ್ವಂಸ್ಯೈವಾಸುರಾಣಾಂ ಗಣಮಖಿಲಮಪಿ ತ್ವಂ ಖಲಾನಾಂ ವಿಘಾತ್ಮಾ ।
ತ್ವದ್ಭಕ್ತಸ್ಯಾಮೃತಾತ್ಮಾ ಮಮ ಶಯಿತ! ಪುಳಿಙ್ಗುಡ್ಯಭಿಖ್ಯೇಽತ್ರ ಪದ್ಮಾ-
ಪೃಥ್ವೀ ದೇವೀಕರಸ್ಥಂ ಪದಯುಗಮಪಿ ಮೇ ಜಾತು ಕುರ್ಯಾಃ ಕರಸ್ಥಮ್॥

ತಾ|| ದಿವ್ಯಾಯುಧಧಾರಿಯಾಗಿ ದೇವತೆಗಳ ದುಃಖಶಾನ್ತಿಗಾಗಿ ರಾಕ್ಷಸ ಕುಲನಾಶಕನಾದ ಸ್ವಾಮಿಯೇ? ನಮಗೆ ಅಮೃತಸ್ವರೂಪನೇ! ಸಮೃದ್ಧವಾದ ಸಸ್ಯ ಕ್ಷೇತ್ರಗಳುಳ್ಳ ತಿರುಪ್ಪುಳಿಂಗುಡಿಯಲ್ಲಿ ಶಯನಮಾಡಿರುವವನೇ! ಅನ್ಯಾದೃಶ ದಿವ್ಯ ಸೌನ್ದರ್ಯವುಳ್ಳ ಲಕ್ಷ್ಮೀದೇವಿಯೂ ಭೂದೇವಿಯೂ ತಮ್ಮ ಮೃದುವಾದ ಹಸ್ತಗಳಿಂದ ಹಿಡಿಯುವ ನಿನ್ನ ಸುಕುಮಾರವಾದ ಪಾದಗಳನ್ನು ನಾನೂ ಹಿಡಿಯುವಂತೆ ನನ್ನನ್ನು ಕೂಗಿ ಕರೆದುಕೊಳ್ಳಲು ಇಲ್ಲಿಗೆ ಒಂದುದಿನ ಬಾ.

(೧೧) ಕೂವುದಲ್ ವರುದಲ್ ಶೆಯ್ದಿಡಾಯೆನ್ಱು ಕುರೈಕಡಲ್
ಕಡೈನ್ದವನ್ ತನ್ನೈ,
ಮೇವಿನನ್ಗಮರ್ನ್ದ ವಿಯನ್ಪುನಲ್ ಪೊರುನಲ್
ವೞುದಿನಾಡನ್ ಶಡಕೋಪನ್,
ನಾವಿಯಲ್ ಪಾಡಲಾಯಿರತ್ತುಳ್ಳುಮಿವೈಯುಮೋರ್-
ಪತ್ತುಮ್ ವಲ್ಲಾರ್ಕಳ್,
ಓವುದಲಿನ್ಱಿ ಯುಲಕಮ್ ಮೂನ್ಱಳನ್ದಾನಡಿಯಿಣೈ
ಯುಳ್ಳತ್ತೋರ್ವಾರೇ.

ಪ್ರ|| ಕುರೈ-ಉದ್ಘೋಷವಂ ಮಾಡುವ, ಕಡಲ್-ಸಮುದ್ರವನ್ನು, ಕಡೈನ್ದವನ್ ತನ್ನೈ-ಕಡೆದವನನ್ನು, ಕೂವುದಲ್-ಕೂಗಿ ಕರೆದುಕೊಳ್ಳೋಣವನ್ನೂ, ವರುದಲ್-

ಬರೋಣವನ್ನೂ, ಶೆಯ್‌ದಿಡಾಯ್-ಮಾಡು, ಎನ್ನು-ಎಂದು, ಮೇವಿ-ಅವನಿಂದ ಅಂಗೀಕರಿಸಲ್ಪಟ್ಟು, ನನ್ನು-ಚೆನ್ನಾಗಿ, ಅಮರ್‌ನ್ದ-ಧರಿಸಿದ, ಪಿರ್ಯಪುನಲ್-ಸಮೃದ್ಧಜಲವುಳ್ಳ, ಪೊರುನಲ್-ತಾಮ್ರಪರ್ಣೀನದಿಯನ್ನು ಉಳ್ಳ, ವೞುದಿನಾಡರ್-ತಿರುವೞುದಿಯೆಂಬ ನಾಡಿಗೆ ನಿರ್ವಾಹಕರಾದ, ಶಡಕೋಪನ್ - ಶ್ರೀ ಶಠಾರಿ ಮುನಿಯ, ನಾವಿಯಲ್ - ನಾಲಿಗೆಯಿಂದ ಉದ್ಭವಿಸಿದ, ಪಾಡಲ್-ಗಾನರೂಪವಾದ ಸೂಕ್ತಿಗಳುಳ್ಳ, ಆಯಿರತ್ತುಳ್ಳುಮ್ - ಸಹಸ್ರಪದ್ಯಮಾಲೆಯೊಳು, ಓರ್-ಅದ್ವಿತೀಯವಾದ, ಇಪ್ಪತ್ತುಮ್ - ಈ ಹತ್ತುಪದ್ಯಗಳನ್ನು, ವಲ್ಲಾರ್‌ಕಳ್-ಬಲ್ಲವರು, ಮೂನುಲಕಮ್ - ಮೂರುಲೋಕಗಳನ್ನೂ, ಅಳನ್ದಾ-ಅಳೆದವನ, ಅಡಿಯಿಣೈ-ಪಾದಯುಗಳವನ್ನು, ಓವುದಲಿನ್ರಿ-ಅವಿಚ್ಛಿನ್ನವಾಗಿ, ಉಳ್ಳತ್ತು-ಮನಸ್ಸಿನಲ್ಲಿ, ಓರ್‌ವಾರ್-ಅನುಸನ್ಧಾನ ಮಾಡುವರು.

( ಸ-ಗಾ-ರ ॥ )—

ಉದ್ಘೋಷಾಮ್ಭೋಧಿಮನ್ಥಂ ಹರಿಮಪಿ ಕಿಲ ಮಾಮಾಹ್ವಯಾಯಾಹಿ ವೇತಿ
ಪ್ರಾರ್ಥ್ಯ ಪ್ರಾಪ್ತಾಭಿಲಾಷಶ್ಶಠರಿಪುರತನೋತ್ತಾಮ್ರಪರ್ಣೀತಟೇಶಃ |
ವಾಚಾ ಸಾಹಸ್ರಮಾಲಾಂ ಕೃತಿಮಿಹ ದಶಕಂ ಚಾದ್ವಿತೀಯಂ ಪಠನ್ತ-
ಶ್ಚಿತ್ತೇ ನಿತ್ಯಂ ವಹನ್ತಿ ಸ್ವಯಮಖಿಲಜಗನ್ಮಾನ-ಪಾದಾಬ್ಜಯುಗ್ಮಮ್ ||

ತಾ|| ಸಮುದ್ರಮಥನವಂ ಮಾಡಿದ ಸ್ವಾಮಿಯನ್ನು ಪ್ರಾರ್ಥಿಸಿ ಅವನಿಂದ ಅಂಗೀಕರಿಸಲ್ಪಟ್ಟು—ದಿವ್ಯತೀರ್ಥ ಸಮೃದ್ಧಿಯುಳ್ಳ ತಾಮ್ರಪರ್ಣೀನದೀ ಸಹಿತವಾದ ತಿರುವೞುದಿನಾಡಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರು ರಚಿಸಿರುವ ಗಾನರೂಪವಾದ ಸೂಕ್ತಿಗಳುಳ್ಳ ಸಹಸ್ರಪದ್ಯಮಾಲೆಯೊಳು ಅದ್ವಿತೀಯವಾದ ಈ ದಶಕವನ್ನು ಬಲ್ಲವರು ತ್ರೈಲೋಕ್ಯವನ್ನು ಅಳೆದ (ತ್ರಿವಿಕ್ರಮಾವತಾರದ ಸ್ವಾಮಿಯ) ಪಾದಯುಗಳವನ್ನೇ ನಿತ್ಯವೂ ಮನಸ್ಸಿನಲ್ಲಿ ಧ್ಯಾನಮಾಡಿ ಆನನ್ದವನ್ನು ಅನುಭವಿಸುವರು.

( ದ್ರು-ಉ-ಸಂ ॥ )—

ಬನ್ಧುತ್ವತಸ್ಸ್ವಮನುಕಮ್ಪಿತವನ್ತಮಾದಾ-
ವಾಪನ್ನಧಾಮ್ನಿ ಭುಜಗಾಧಿಪತೌ ಶಯಾನಮ್ |
ಸ್ವಾಪೇಕ್ಷಿತಂ ಮುನಿರಯಾಚತ ತಂ ದ್ವಿತೀಯೇ
ತಸ್ಯೈಕರೂಪಶಯನೇಽಪಿ ಚ ದುಃಖಿತೋಽಭೂತ್ ||

( ದ್ರ–ಉ–ತಾ–ರ || )—

ಲಕ್ಷ್ಮೀಶ್ರೀಸಮ್ಪನ್ನಭೂಮ್ನಾ ಮಿತಧರಣಿತಯಾ ಪದ್ಮನೇತ್ರತ್ವಯೋಗಾತ್
ಸ್ಥಿತ್ಯಾದ್ಯೈಸ್ಸ್ವೈಶ್ಚರಿತ್ರೈಸ್ಸ್ವಹೃದಯಹರಣಾಚ್ಚಾಙ್ಗಜೇನಾವನಾಚ್ಚ |
ತಾರ್ಕ್ಷ್ಯಾಂಸೌ ಚಾಧಿರುಹ್ಯಾರಿಗಣನಿರಸನಾದ್ದೇವದುಷ್ಪ್ರಾಪತಾದ್ಯೈ-
ರ್ದುಷ್ಕರ್ಮೋನ್ಮೂಲನಾದ್ಯೈಸ್ಸುಚರಿತಕೃತದಯೋ ಮಾಧವಶ್ಚೇತ್ಯವೋಚತ್ ||

(ಈ ದ್ವಿತೀಯದಶಕದ ಸಾರಾಂಶ—)

ಈ ಎರಡನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಿರುಪ್ಪುಳಿಂಗುಡಿಯೆಂಬ ದಿವ್ಯದೇಶದ ಸ್ವಾಮಿಯನ್ನು ಪ್ರಾರ್ಥಿಸಿ, ಅವನ ಕಟಾಕ್ಷಕ್ಕೆ ಪಾತ್ರವಾಗಬೇಕೆಂತಲೂ, ಅವನ ಪಾದಾರವಿನ್ದವೇ ತಮ್ಮ ತಲೆಗೆ ಅಲಂಕಾರವಾಗಬೇಕೆಂತಲೂ, ಅವನು ಲಕ್ಷ್ಮೀಸಹಿತನಾಗಿ ತಮ್ಮ ಸಮೀಪಕ್ಕೆ ಬಿಜಯಮಾಡಬೇಕೆಂತಲೂ, ಶ್ರೀದೇವಿಯಿಂದಲೂ ಭೂದೇವಿಯಿಂದಲೂ ತಮ್ಮ ಮೃದುಹಸ್ತಗಳಿಂದ ಹಿಡಿಯಲ್ಪಟ್ಟಿರುವ ಅವನ ಪಾದಾರವಿನ್ದಗಳನ್ನು ತಾವು ಹಿಡಿಯಬೇಕೆಂತಲೂ ಅಪೇಕ್ಷಿಸುತ್ತಾ, ಈ ದಶಕವನ್ನು ಪಠಿಸುವವರು ತ್ರಿವಿಕ್ರಮಾವತಾರದ ಸ್ವಾಮಿಯ ಪಾದಯುಗಳವನ್ನು ನಿತ್ಯವೂ ಸ್ಮರಿಸಿ ಆನನ್ದಾನುಭವವಂ ಮಾಡುವರೆಂಬ ಫಲವನ್ನೂ ಸೂಚಿಸಿ ಇರುತ್ತಾರೆ.

——:❀:——

ಶ್ರೀಃ

## ನವಮಶತಕದಲ್ಲಿ—ತೃತೀಯದಶಕ.

(ಓರಾಯಿರಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಶೀಲಗುಣವನ್ನು ಅನುಭವಿಸಲು ತಮ್ಮ ಮನಸ್ಸನ್ನು ಪ್ರೇರಿಸುತ್ತಾರೆ.)

---

(೧) ಓರಾಯಿರಮಾಯುಲಕೇೞುಳಿಕ್ಕುಮ್,
ಪೇರಾಯಿರಮ್ ಕೊಣ್ಡದೋರ್ ಸೀಡುಡೈಯನ್,
ಕಾರಾಯಿನ ಕಾಳನನ್ಮೇನಿ ಯಿನನ್,
ನಾರಾಯಣನ್ ನಙ್ಗಳ್ ಪಿರಾನವನೇ.

ಪ್ರ|| ಓರ್-ಒಂದೊಂದು ನಾಮವೂ, ಆಯಿರವಾಯ್-ಸಹಸ್ರ ಸಹಸ್ರವಾಗಿ, ಉಲಕು ಏೞುಃ-ಸಪ್ತಲೋಕಗಳನ್ನೂ (ಸಕಲ ಲೋಕಗಳನ್ನೂ), ಅಳಿಕ್ಕುಮ್-ರಕ್ಷಿಸತಕ್ಕ, ಪೇರ್-ನಾಮಧೇಯಗಳು, ಆಯಿರಮ್-ಸಹಸ್ರವನ್ನೂ, ಕೊಣ್ಡು-ಪಡೆದಿರುವ, ಓರ್-ಅದ್ವಿತೀಯವಾದ, ಪೀಡು-ಮಹಿಮೆಯನ್ನು, ಉಡೈಯರ್-ಉಳ್ಳವನಾದ, ಕಾಳ ಕಾರಾಯಿನ-ಕಾಳಮೇಘಶ್ಯಾಮನಾದ, ನೞ-ಶ್ಲಾಘ್ಯವಾದ (ಅಪ್ರಾಕೃತವಾದ), ಮೇನಿಯಿನಃ-ದಿವ್ಯವಿಗ್ರಹವುಳ್ಳ, ನಾರಾಯಣಃ ಅವನೇ-ಸರ್ವಮೂಲಭೂತನಾದ ನಾರಾಯಣನೇ, ನಙ್ಗಳ್ ಪಿರಾಃ-ನಮ್ಮ ಸ್ವಾಮಿಯು.

( ಸ-ಗಾ-ರ || )—

ಏಕೈಕನಾಮ ಬಹುಧಾ ಜಗತಾಂ ಚ ರಕ್ಷಾಂ
ಕರ್ತುಂ ಕ್ಷಮಂ ಭವತಿ ! ನಾಮಸಹಸ್ರವಾಚ್ಯಃ |
ನೀಲಾಮ್ಬುದಾಭಸುತನುಶ್ಶುಭದಿವ್ಯರೂಪೋ
ನಾರಾಯಣೋ ಓಪ್ರತಿಮ ಏವ ಕಿಲ ಪ್ರಭುರ್ನಃ ||

ತಾ|| ಒಂದೊಂದು ನಾಮವೂ ಸಹಸ್ರ ಸಹಸ್ರವಾಗಿ ಸಕಲಲೋಕಗಳನ್ನೂ ರಕ್ಷಿಸಲು ಶಕ್ತವಾದ ಸಹಸ್ರನಾಮಗಳುಳ್ಳ ಮಹಾಮಹಿಮನಾದ ನೀಲಮೇಘ ಶ್ಯಾಮನಾದ ದಿವ್ಯವಿಗ್ರಹವುಳ್ಳ ನಾರಾಯಣನೇ ನಮ್ಮ (ಮಹೋಪಕಾರಕನಾದ) ಸ್ವಾಮಿಯು.

(೨) ಅವನೇ ಯಕಲ್ ಞಾಲವೆ ಪಡೈತ್ತಿಡನ್ದಾನ್,
ಅವನೇ ಯಃದುಣ್ಡುಮಿೞ್ನ್ದಾನಳನ್ದಾನ್,
ಅವನೇ ಯವನುಮವನುಮವನುಮೆ,
ಅವನೇಮಱ್ಱೆಲ್ಲಾಮುಮೆಱಿನ್ದನಮೇ.

ಪ್ರ|| ಅಕಲ್-ವಿಸ್ತೀರ್ಣವಾದ, ಞಾಲಮ್-ಪ್ರಪಂಚವನ್ನು, ಪಡೈತ್ತು-ಸೃಷ್ಟಿಸಿ, ಇಡನ್ದಾಃ-(ಪ್ರಳಯದಲ್ಲಿ) ಉದ್ಧರಿಸಿದ, ಅವನೇ-ಅವನೇ, ಅವನೇ-ಅವನೇ, ಅಃದು-ಆ ಭೂಮಿಯನ್ನು, ಉಣ್ಡು-ಭಕ್ಷಿಸಿ, ಉಮಿೞ್ನ್ದಾಃ - ಉಗಿದವನೂ, ಅಳನ್ದಾಃ-(ತ್ರಿವಿಕ್ರಮನಾಗಿ) ಅಳೆದವನೂ, ಅವನುಮ್ ಅವನುಮ್ ಅವನುಮ್-ಪ್ರಸಿದ್ಧರಾದ ಬ್ರಹ್ಮರುದ್ರೇನ್ದ್ರರೂ, ಅವನೇ-ಅವನೇ; ಮಱ್ಱು-ಮತ್ತೂ, ಎಲ್ಲಾಮುಮ್-ಸಕಲ ಚೇತನಾಚೇತನಗಳೂ, ಅವನೇ-ಅವನೇ ಎಂದು, ಅಱಿನ್ದನಮೇ-ತಿಳಿದೆವಷ್ಟೆ.

( ಸ-ಗಾ-ರ || )—

ಪೃಥ್ವೀಮಿಮಾಂ ಚ ವಿತತಾಮಯಮೇವ ಸೃಷ್ಟ್ವಾ
ಚೋದ್ಧೃತ್ಯ ಭಕ್ಷಣಕರೋಽಪಿ ಪುನಶ್ಚ ಸೃಷ್ಟ್ವಾ ।
ಮಾತಾ ಚ ಪಾದತಲತಸ್ತ್ವಯಮೇವ ಸೃಷ್ಟಿ-
ಸ್ಥಿತ್ಯನ್ತಕೃಚ್ಚ ! ಸಕಲಂ ಚ ತಮೇವ ವಿದ್ಮಃ ||

ತಾ|| ವಿಸ್ತೀರ್ಣವಾದ ಪ್ರಪಂಚವನ್ನು ಸೃಷ್ಟಿಸಿ, ಪ್ರಳಯದಲ್ಲಿ (ವರಾಹ ರೂಪಿಯಾಗಿ) ಉದ್ಧರಿಸಿದವನೇ ಆ ಭೂಮಿಯನ್ನು ಭಕ್ಷಿಸಿ ಪುನಃ ಉಗಿದು ಅಳೆದು ಬ್ರಹ್ಮರುದ್ರೇನ್ದ್ರಾದಿರೂಪಿಯಾಗಿಯೂ, ಸಕಲ ಚೇತನಾಚೇತನಾತ್ಮಕನಾಗಿಯೂ ಇದಾನೆಂದು ತಿಳಿದು ಇದೇವಷ್ಟೆ !

(೩) ಅಱಿನ್ದನ ವೇದವರುಮ್ ಪೊರುಳ್ ನೂಲ್‌ಕಳ್,
ಅಱಿನ್ದನ ಕೊಳ್ಕ ಅರುಮ್ ಪೊರುಳಾದಲ್,
ಅಱಿನ್ದನರೆಲ್ಲಾಮರಿಯೈ ವಣಜ್ಗಿ,
ಅಱಿನ್ದನರ್ ನೋಯ್‌ಕಳ್ಱುಕ್ಕುಮರುನ್ದೇ

ಪ್ರ|| ಅಱಿನ್ದನ-ತಿಳಿದವುಗಳಾದ, ವೇದ-ವೇದಗಳ, ಅರುಮ್ ಪೊರುಳ್-ಶ್ಲಾಘ್ಯವಾದ ಅರ್ಥವನ್ನು ನಿರ್ಣಯಿಸುವ, ನೂಲ್‌ಕಳ್ - ಬ್ರಹ್ಮಸೂತ್ರೇತಿಹಾಸ ಪುರಾಣಾದಿ ಶಾಸ್ತ್ರಗಳಿಂದ, ಅರುಮ್ ಪೊರುಳಾದಲ್-ತಿಳಿಯಲು ಅಶಕ್ಯವಾದ ವಸ್ತುವೆಂದು, ಅಱಿನ್ದನ - ತಿಳಿದಂತೆ, ಕೊಳ್ಕ - ಅಂಗೀಕರಿಸಬಹುದು. ಅಱಿನ್ದನರ್ ಎಲ್ಲಾಮ್ - ಪ್ರಾಜ್ಞರಾದ ವೈದಿಕರೆಲ್ಲರೂ, ಅರಿಯೈ - ಪಾಪಹರನಾದ ಹರಿಯನ್ನು, ವಣಜ್ಗಿ-ನಮಸ್ಕರಿಸಿ, (ಅವನನ್ನೇ) ನೋಯ್‌ಕಳ್-ಸಂಸಾರ ವ್ಯಾಧಿಗಳನ್ನು, ಅಱುಕ್ಕುಮ್ - ಛೇದಿಸುವ, ಮರುನ್ದು - ದಿವ್ಯೌಷಧವೆಂದು, ಅಱಿನ್ದನರ್ - ತಿಳಿದಿರುವರು.

( ಸ-ಗಾ-ರ )—

ವೇದಾನ್ತಗುಪ್ತಪರಮಾರ್ಥ ಪರೈಶ್ಚ ಶಾಸ್ತ್ರೈ-
ರೇಷೋಽಪ್ರಮೇಯ ಇತಿ ನಿಶ್ಚಿತಮೇವ ತತ್ತ್ವಮ್ ।
ಪ್ರಾಜ್ಞಾಶ್ಚ ವೈದಿಕವರಾ ಹರಿಮೇವ ನತ್ವಾ
ವ್ಯಾಧಿಚ್ಛಿದಂ ಕಿಲ ವಿದುಃ ಪರಮೌಷಧಂ ತಮ್||

ತಾ॥ ವೇದಗಳ ಶ್ಲಾಘ್ಯವಾದ ಅರ್ಥವನ್ನು ನಿರ್ಣಯಿಸುವ ಶಾಸ್ತ್ರಗಳಿಂದ ತಿಳಿಯಲು ಅಶಕ್ಯವಾದ ವಸ್ತುವೆಂದು ( ಪರಮಾತ್ಮನನ್ನು ) ತಿಳಿಯಬಹುದು. ಪ್ರಾಜ್ಞರಾದವರೆಲ್ಲರೂ ಪಾಪಹರನಾದ ಶ್ರೀಹರಿಯನ್ನು ನಮಸ್ಕರಿಸಿ, ಅವನನ್ನೇ ಸಂಸಾರವ್ಯಾಧಿನಾಶಕವಾದ ದಿವ್ಯೌಷಧವೆಂದು ತಿಳಿದಿರುವರು.

(೪) ಮರುನ್ದೇ ನಙ್ಗಳ್ ಪೋಕಮಕಿೞ್ಚಿಕ್ಕೆನ್ನು,
ಪೆರುನ್ದೇವರ್ ಕುೞಾಙ್ಗಳ್ ಪಿದಱ್ಱುಮ್ ಪಿರಾನ್,
ಕರುನ್ದೇವನೆಮ್ಮಾನ್ ಕಣ್ಣನ್ ವಿಣ್ಣುಲಕಮ್,
ತರುನ್ದೇವನ್ನೈ ಚೋರೇಲ್ ಕಣ್ಡಾಯ್ ಮನಮೇ.

ಪ್ರ॥ ನಙ್ಗಳ್ – ನಮ್ಮ, ಪೋಕ – ಭೋಗದ, ಮಕಿೞ್ಚಿಕ್ಕು–ವೃದ್ಧಿಗೆ, ಮರುನ್ದೇ–ವರ್ಧಕವಾದ ಅಮೃತವೇ, ಎನ್ನು–ಎಂದು, ಪೆರುಮ್‌ದೇವರ್ – ಮಹನೀಯರಾದ ನಿತ್ಯಸೂರಿಗಳ, ಕುೞಾಙ್ಗಳ್ – ಸಮೂಹಗಳು, ಪಿದಱ್ಱುಮ್ – (ಪ್ರೀತ್ಯತಿಶಯದಿಂದ) ಕೂಗುವವು. ಪಿರಾನ್–ಅನ್ತಹ ಸ್ವಾಮಿಯು (ಮಹೋಪಕಾರಕನು) ಕರುಮ್ ದೇವನ್–ಶ್ಯಾಮಳವಿಗ್ರಹವುಳ್ಳವನು, ಎಮ್ಮಾನ್–ನಮ್ಮನ್ನು ವಶೀಕರಿಸಿದ ಸ್ವಾಮಿಯು, ಕಣ್ಣನ್–ಸರ್ವಸುಲಭನಾದ ಕೃಷ್ಣನು, ವಿಣ್ ಉಲಕಮ್ – ಪರಮಪದ ಭೋಗವನ್ನು, ತರುಮ್ – ಕೊಡುವವನಾದ, ದೇವನ್ನೈ – ಆ ದೇವಾಧಿದೇವನನ್ನು, ಮನಮೇ – ಮನಸ್ಸೇ!, ಶೋರೇಲ್ ಕಣ್ಡಾಯ್ – ಎಂದಿಗೂ ಬಿಡದೇ ಇರು.

( ಸ–ಗಾ–ರ ॥ )—

ದಿವ್ಯೌಷಧಂ ಪರಮಮೇವ ಕಿಲಾಸ್ಮದೀಯಂ
ಭೋಗಾವಳೇರಿತಿ ಚ ಸೂರಿವರ್ಯೈಃ ಪ್ರತುಷ್ಟ್ಯೈಃ |
ಸಙ್ಕೀರ್ತಿತಃ ಪ್ರಭುರಸೌ ಮಮ ನೀಲವರ್ಣಃ
ಕೃಷ್ಣೋ ಮುಕುನ್ದ ಇತಿ ಮಾನಸ ! ಮಾ ತ್ಯಜೈನಮ್ ||

ತಾ॥ ನಮ್ಮ ಭೋಗವರ್ಧಕವಾದ ಪರಮೌಷಧವೆಂದು ( ಅವನನ್ನೇ ) ಮಹನೀಯರಾದ ನಿತ್ಯಸೂರಿಗಳ ಸಮೂಹಗಳು ಉದ್ಘೋಷಿಸುತ್ತಿವೆ. ಅನ್ತಹ ಸ್ವಾಮಿಯೇ ನೀಲಮೇಘಶ್ಯಾಮನಾದ ನಮ್ಮ ಶ್ರೀಕೃಷ್ಣನು. ಎಲೈ ಮನಸ್ಸೇ! ಪರಮಪದಭೋಗವನ್ನು ಕೊಡುವವನಾದ ಆ ದೇವಾಧಿದೇವನನ್ನು ನೀನು ಎಂದಿಗೂ ಬಿಡಬೇಡ.

(೭) ಮನಮೇ ಯುನ್ನೈ ವಲ್‌ವಿನೈಯೇನಿರನ್ದು,
ಕನಮೇ ಶೊಲ್ಲಿನೇನಿದು ಶೋರೇಲ್ ಕಣ್ಡಾಯ್,
ಪುನಮೇವಿಯ ಪೂನ್ದಣ್ ತುಳಾಯಲಙ್ಗಲ್
ಇನಮೇದುಮಿಲಾನೈ ಯಡೈವದುಮೇ.

ಪ್ರ|| ಮನಮೇ -- ಮನಸ್ಸೇ, ಉನ್ನೈ -- ನಿನ್ನನ್ನು, ವಲ್‌ವಿನೈಯೇನ್ -- ಮಹಾಪಾಪವುಳ್ಳ ನಾನು, ಇರನ್ದು -- ಪ್ರಾರ್ಥಿಸಿ, ಕನಮೇ -- ದೃಢವಾಗಿ, ಶೊಲ್ಲಿನೇನ್ -- ಹೇಳಿದೆನು. ಇದು -- ಇದನ್ನು, ಶೋರೇಲ್‌ಕಣ್ಡಾಯ್ -- ಕೈಬಿಡದೆ ರಕ್ಷಿಸು. (ಯಾವುದನ್ನು ಎಂದರೆ--) ಪುನಮ್ -- ತನ್ನ ಸ್ಥಲದಲ್ಲಿ, ಮೇವಿಯ -- ಬೆಳೆದ, ಪೂಮ್ -- ರಮ್ಯವಾದ, ತಣ್ -- ಶೀತಳವಾದ, ತುೞಾಯ್ ಅಲಙ್ಗಲ್ -- ತುಳಸಿಯಮಾಲೆಯುಳ್ಳ, ಏದುಮ್ -- ಯಾವಪ್ರಕಾರದಲ್ಲೂ, ಇನಮ್ ಇಲಾನೈ -- ತನಗೆ ಸಮಾನವಿಲ್ಲದ ಸ್ವಾಮಿಯನ್ನು, ಅಡೈವದುಮೇ -- ಆಶ್ರಯಿಸಬೇಕು ಎಂಬುವುದನ್ನು.

( ಸ-ಗಾ-ರ || )--

ಹೇ ಚಿತ್ತ ! ಪಾಪವಿವಶೋಽಹಮಿಹಾರ್ಥಯೇ ತ್ವಾ-
ಮೇತತ್ಪರಂ ಸುದೃಢಮೇವ ಪುನಃ ಪುನಶ್ಚ |
ದಿವ್ಯಾತಿರಮ್ಯತುಲಸೀಸ್ರಜಮಪ್ರಮೇಯಂ
ನಿತ್ಯಂ ಭಜ ತ್ವಮಸಮಂ ! ನ ಹಿ ಜಾತು ಮುಞ್ಚ ||

ತಾ|| ಎಲೈ ಮನಸ್ಸೇ ! ನಿನ್ನನ್ನು ಮಹಾಪಾಪವುಳ್ಳ ನಾನು ಪ್ರಾರ್ಥಿಸುವುದೇನೆಂದರೆ--" ರಮ್ಯವಾಗಿಯೂ ಶೀತಳವಾಗಿಯೂ ಇರುವ ತುಳಸೀಮಾಲೆಯನ್ನು ಧರಿಸಿರುವ ಅನ್ಯಾದೃಶನಾದ ಸ್ವಾಮಿಯನ್ನೇ ನೀನು (ಎಂದಿಗೂ ಬಿಡದೆ) ಆಶ್ರಯಿಸಬೇಕು."

(೮) ಅಡೈವದುಮಣಿಯಾರ್ ಮಲರ್‌ಮಙ್ಗೈ ತೋಳ್,
ಮಿಡೈವದುಮಶುರರ್‌ಕ್ಕು ವೆಮ್‌ಪೋರ್‌ಕಳೇ,
ಕಡೈವದುಮ್ ಕಡಲುಳ್ ಅಮುದಮ್, ಎನ್ ಮನಮ್,
ಉಡೈವದುಮವರ್ಕ್ಕೇ ಯೊರುಮಾಕವೇ.

ಪ್ರ॥ ಮಲರ್ಮಙ್ಗೈ-ಪದ್ಮವಾಸಿನಿಯಾದ ಲಕ್ಷ್ಮೀದೇವಿಯು, ಅಣಿ ಆರ್-ಆಭರಣಗಳಿಂದ ಭರಿತವಾದ, ತೋಳ್ - ತೋಳುಗಳನ್ನೇ, ಅಡೈವದುಮ್ - ಆಶ್ರಯಿಸೋಣವೂ, ಅಶುರರ್ಕ್ಕು - ರಾಕ್ಷಸರಿಗೆ, ವೆಮ್ ಪೋರ್ ಕಳೇ - ಕ್ರೂರವಾದ ಯುದ್ಧಗಳನ್ನೇ, ಮಿಡೈವದುಮ್-ಉಂಟುಮಾಡಿ ಅವರನ್ನು ನಾಶಪಡಿಸುವುದೂ, ಕಡಲುಳ್ - ಸಮುದ್ರದಲ್ಲಿ, ಅಮುದಮ್ ಕಡೈವದುಮ್ - ಅಮೃತವು ಉಂಟಾಗುವಂತೆ ಮಥನಮಾಡುವುದೂ, ( ಇವುಗಳನ್ನೆಲ್ಲಾ ನಿರ್ವಹಿಸಿದ ) ಅವತ್ಕೇ- ಆ ಸ್ವಾಮಿಗೇ, ಎ - ನನ್ನ, ಮನಮ್ - ಮನಸ್ಸು, ಒರುಜ್ಞಾಕವೇ - ಬಿಡದೆ ಸ್ಥಿರವಾಗಿ, ಉಡೈವದುಮ್-(ಶಿಥಿಲವಾಗಿ) ವಶ್ಯವಾಗಿದೆ.

( ಸ-ಗಾ-ರ ॥ )—

ಬಾಹುದ್ವಯೇ ಚ ಸಕಲಾಭರಣಾಞ್ಚಿತೇ ಶ್ರೀ-
ದೇವ್ಯಾಶ್ರ್ಯ ಸಙ್ಗಮ ಇಹಾಸ್ಯ ನಿಶಾಟನಾಶಃ ।
ಕ್ಷೀರಾಮ್ಬುಧೇಶ್ಚ ಮಥನಂ ತ್ವಮೃತಾರ್ಥಮಿತ್ಯೇ-
ವೈತದ್ವಿಚಿನ್ತ್ಯ ನಿರತಂ ಮಮ ಚಿತ್ತಮಸ್ಮಿನ್ ॥

ತಾ॥ ಪದ್ಮವಾಸಿನಿಯಾದ ಲಕ್ಷ್ಮೀದೇವಿಯ ದಿವ್ಯಾಭರಣಭೂಷಿತವಾದ ತೋಳುಗಳನ್ನೇ ಆಶ್ರಯಿಸೋಣವೂ, ರಾಕ್ಷಸಧ್ವಂಸಕವಾದ ಘೋರಯುದ್ಧಗಳನ್ನು ಮಾಡೋಣವೂ, ಸಮುದ್ರದಲ್ಲಿ ಅಮೃತವನ್ನು ಕಡೆದು ದೇವತೆಗಳಿಗೆ ಹಂಚೋಣವೂ— ಇವುಗಳನ್ನೆಲ್ಲಾ ಮಾಡಿದ ನಮ್ಮ ಸ್ವಾಮಿಗೇ ನನ್ನ ಮನಸ್ಸು ಎಂದಿಗೂ ವಶ್ಯವಾಗಿದೆ.

(೭) ಆಕಮ್ ಶೇರ್ ನರಶಿಙ್ಗಮದಾಕಿ, ಓರ್
ಆಕಮ್ ವಳ್ಳುಕಿರಾಲ್ ಪಿಳನ್ದಾನುಱೈ, -
ಮಾಕವೈಕುನ್ದಮ್ ಕಾಣ್ಬದಱ್ಕು, ಎನ್ ಮನಮ್
ಏಕಮೆಣ್ಣುಮಿರಾಪ್ಪಕಲಿಲ್ಲೈಯೇ.

ಪ್ರ॥ ಆಕಮ್-ಒಂದೇ ಶರೀರದಲ್ಲಿ, ಶೇರ್- ಸೇರಿದ, ನರಶಿಙ್ಗಮದು ಆಕಿ- ನರವೇಷ ಸಿಂಹವೇಷಗಳುಳ್ಳವನಾಗಿ, ಓರ್ ಆಕಮ್-(ಹಿರಣ್ಯಾಸುರನ) ಆ ಶರೀರದ ವಕ್ಷಸ್ಥಲವನ್ನು, ವಳ್ ಉಕಿರಾಲ್ - ಬಗ್ಗಿ ತೀಕ್ಷ್ಣವಾದ ನಖಗಳಿಂದ, ಪಿಳನ್ದಾ - ಸೀಳಿದ ಸ್ವಾಮಿಯು, ಉಱೈ - ನಿತ್ಯವಾಸಮಾಡುವ, ಮಾಕವೈಕು

ನ್ದಮ್-ಶ್ರೀ ವೈಕುಣ್ಠವನ್ನು, ಕಾಣ್ಬದಱ್ಕು - ಕಾಣುವುದಕ್ಕೆ, ಎನ್ ಮನಮ್-ನನ್ನ ಮನಸ್ಸು, ಇರಾಪ್ಪಕಲ್-ರಾತ್ರಿಯೂ ಹಗಲೂ, ಇನ್ಱಿ-ಬೇರೆ ಚಿನ್ತೆಯಿಲ್ಲದೆ, ಏಕಮ್ - ಒಂದೇಪ್ರಕಾರದಲ್ಲಿ, ಎಣ್ಣುಮ್-ಚಿನ್ತಿಸುತ್ತಿರುವುದು.

( ಸ-ಗಾ-ರ ॥ )—

ಏಕಾಂ ತನುಂ ಚ ನರತಾಮಪಿ ಸಿಂಹತಾಂ ಯೋ
ಧೃತ್ವಾಽಸುರಸ್ಯ ನಖಕೋಟಿ ಬಿಭೇದ ವಕ್ಷಃ ।
ವೈಕುಣ್ಠವರ್ತಿನಮಮುಂ ಹಿ ದಿದೃಕ್ಷು ಚಿತ್ತಂ
ನಕ್ತಂದಿವಂ ಚ ಕುತುಕಾಕುಲಿತಂ ಮದೀಯಮ್ ॥

ತಾ॥ ಒಂದೇ ಶರೀರದಲ್ಲಿ ನರವೇಷವೂ ಸಿಂಹವೇಷವೂ ಉಳ್ಳವನಾಗಿ ಹಿರಣ್ಯಾಸುರನ ವಕ್ಷಸ್ಸ್ಥಲವನ್ನು ತನ್ನ ತೀಕ್ಷ್ಣವಾದ ನಖಗಳಿಂದ ಸೀಳಿದ ಮಹಾಸ್ವಾಮಿಯು ನಿತ್ಯವಾಸಮಾಡುವ ಶ್ರೀವೈಕುಣ್ಠವನ್ನು ಕಾಣಬೇಕೆಂದೇ ನನ್ನ ಮನಸ್ಸು ರಾತ್ರಿಯೂ ಹಗಲೂ ಏಕಪ್ರಕಾರವಾಗಿ ಚಿನ್ತಿಸುತ್ತಿದೆ. ( ಬೇರೆ ಚಿನ್ತೆಯೇ ಇಲ್ಲವೆಂದು ಭಾವವು.)

(೮) ಇನ್ಱಿಪ್ಪೋಕ ಇರುವಿನೈಯುಮ್ ಕೆಡುತ್ತು,
ಒನ್ಱಿಯಾಕ್ಕೈ ಪ್ಪುಕಾಮೈ ಯುಯ್ಯಕ್ಕೊಳ್ವಾನ್,
ನಿನ್ಱವೇಙ್ಗಡಮ್ ನೀಣಿಲತ್ತುಳ್ಳದು,
ಶೆನ್ಱು ತೇವರ್ಕಳ್ ಕೈತ್ತೊೞುವಾರ್ಕಳೇ.

ಪ್ರ॥ ಇರುವಿನೈಯುಮ್ - ಪುಣ್ಯಪಾಪರೂಪ ದ್ವಿವಿಧಕರ್ಮಗಳನ್ನೂ, ಇನ್ಱಿಪ್ಪೋಕ - ಇಲ್ಲದೆ ಹೋಗುವಂತೆ, ಕೆಡುತ್ತು - ನಾಶಪಡಿಸಿ, ಒನ್ಱಿ - ಪ್ರಕೃತಿಯೊಡನೆ ಸೇರಿ, ಆಕ್ಕೈ - ದೇವಾದಿ ಶರೀರದಲ್ಲಿ, ಪುಕಾಮೈ - ಪ್ರವೇಶಿಸದೆ ಇರುವಂತೆ, ಉಯ್ಯಕ್ಕೊಳ್ವಾನ್ - (ಚೇತನರ) ಉಜ್ಜೀವನವನ್ನು ಉಂಟುಮಾಡುವವನು, ನಿನ್ಱ - ನಿಂತಿರುವ, ವೇಙ್ಗಡಮ್ - ಶ್ರೀ ವೇಙ್ಕಟಾದ್ರಿಯು, ನೀಳ್ ನಿಲತ್ತು - ಶ್ಲಾಘ್ಯವಾದ ಭೂಮಿಯಲ್ಲಿ, ಉಳ್ಳದು - ಇರುತ್ತದೆ. ಶೆನ್ಱು - ಅದರ ಸಮೀಪಕ್ಕೆ ಹೋಗಿ ಆಶ್ರಯಿಸಿ, ಕೈತ್ತೊೞುವಾರ್ಕಳೇ - ಅಂಜಲಿಮಾಡುವವರೇ, ತೇವರ್ಕಳ್ - ದೇವತೆಗಳು (ನಿತ್ಯಸೂರಿಸದೃಶರು).

( ಸ-ಗಾ-ರ || )—

ಪ್ರಧ್ವಂಸ್ಯ ಚ ದ್ವಿವಿಧಕರ್ಮಫಲಂ ಪ್ರವೇಶಂ
ದೇಹೇಷು ಚಾಪಿ ವಿವಿಧೇಷು ನಿವಾರ್ಯ ಚಾಸ್ಮಾನ್ |
ಉಜ್ಜೀವಯನ್ ಜಗತಿ ಭಾತಿ ಚ ವೇಙ್ಕಟಾದ್ರಿ
ತಂ ಪ್ರಾಪ್ಯ ಸಾಞ್ಜಲಿಪುಟಾಃ ಕಿಲ ಸನ್ತಿ ದೇವಾಃ ||

ತಾ|| ಪುಣ್ಯಪಾಪರೂಪ ದ್ವಿವಿಧಕರ್ಮಗಳನ್ನೂ ನಾಶಪಡಿಸಿ, ನಾನಾವಿಧ ಪ್ರಾಕೃತಶರೀರ ಪ್ರವೇಶವನ್ನು ನಿವಾರಣಮಾಡಿ, ನಮ್ಮ ಉಜ್ಜೀವನವನ್ನು ಉಂಟುಮಾಡುವ ಸ್ವಾಮಿಯು ನಿಂತಿರುವ ಶ್ರೀವೇಙ್ಕಟಾದ್ರಿಯು ಈ ವಿಶಾಲವಾದ ಭೂಮಿಯಲ್ಲಿ ಪ್ರಕಾಶಿಸುತ್ತಿದೆ. ಅದರ ಸಮೀಪಕ್ಕೆ ಹೋಗಿ ಆಶ್ರಯಿಸಿ ಅಂಜಲಿ ಮಾಡುವವರೇ ನಿತ್ಯಸೂರಿಗಳು (ದೇವತೆಗಳಿಗೆ ಸಮಾನರು).

(೯) ತೊೞುದು ಮಾಮಲರ್ ನೀರ್‌ಶುಡರ್ ದೂಪಮ್ಕೊಣ್ಡು,
ಎೞುದುಮೆನ್ನುಮಿದು ಮಿಕೈ ಯಾದಲಿಲ್,
ಪೞುದಿಲ್ ತೊಲ್‌ಪುಕೞ್ ಪಾಮ್ಬಣೈ ಪ್ಪಳ್ಳಿಯಾಯ್,
ತೞುವುಮಾಱಱಿಯೇನುನ ತಾಳ್‌ಕಳೇ.

ಪ್ರ|| ಮಾ ಮಲರ್-ಶ್ಲಾಘ್ಯವಾದ ಪುಷ್ಪವನ್ನೂ, ನೀರ್-ಅರ್ಘ್ಯಪಾದ್ಯಾದಿ ತೀರ್ಥವನ್ನೂ, ಶುಡರ್ ದೂಪಮ್-ದೀಪಧೂಪಗಳನ್ನೂ, ಕೊಣ್ಡು-ತೆಗೆದುಕೊಂಡು ಹೋಗಿ, ತೊೞುದು-ಸೇವಿಸಲು, ಎೞುದುಮ್-ಸನ್ನದ್ಧರಾಗೋಣ, ಎನ್ನುಮಿದು-ಎಂದು ಹೇಳೋಣವೂ, ಮಿಕೈ-ಅಧಿಕವು. ಆದಲಿಲ್-ಆದುದರಿಂದ, ಪೞುದು-ಆರಾಧಿಸಲು ಅಶಕ್ಯನೆಂಬ ದೋಷವೂ, ಇಲ್-ಇಲ್ಲದ, ತೊಲ್‌ಪುಕೞ್-ಅನಾದಿ ಸಿದ್ಧವಾದ ಸೌಶೀಲ್ಯಾದಿ ಕೀರ್ತಿಯುಳ್ಳವನಾಗಿ, ಪಾಮ್ಬಣೈ-ಶೇಷಶಯ್ಯೆಯಲ್ಲಿ, ಪಳ್ಳಿಯಾಯ್ - ಶಯನಮಾಡಿರುವವನೇ, ಉನತಾಳ್ - ನಿನ್ನ ಪಾದಗಳನ್ನು ತೞುವುಮ್ ಆಱು- ಸೇರುವ ಪ್ರಕಾರವನ್ನು, ಅಱಿಯೇನ್-ತಿಳಿಯೆನು.

( ಸ-ಗಾ-ರ )—

ಪುಷ್ಪಂ ಚ ತೀರ್ಥಮಪಿ ದೀಪಸುಧೂಪಯುಕ್ತಂ
ಸ್ವೀಕೃತ್ಯ ಚಾರ್ಚಯಿತುಮುತ್ಸುಕತಾಽಪಿ ಮಾ ಭೂತ್ |
ಏವಂ ಸುಶೀಲಮನಘಂ ತವ ಶೇಷಶಾಯಿನ್ !
ಪಾದಾಮ್ಬುಜಂ ತವ ಕಥಂ ನು ಭಜೇ ! ನ ವೇದ್ಮಿ ||

ತಾ॥ "ಶ್ಲಾಘ್ಯವಾದ ಪುಷ್ಪವನ್ನೂ ತೀರ್ಥವನ್ನೂ ದೀಪಧೂಪಗಳನ್ನೂ ತೆಗೆದುಕೊಂಡು ಹೋಗಿ ಸೇವಿಸಲು ನಾವು ಸನ್ನದ್ಧರಾಗೋಣ"—ಎಂದು ಹೇಳುವುದೂ ಕೂಡ ಅನಾವಶ್ಯಕ. ಆದುದರಿಂದ ಆರಾಧಿಸಲು ಅಶಕ್ಯನೆಂಬ ದೋಷವೂ ಇಲ್ಲದ ಅನಾದಿಸಿದ್ಧವಾದ ಸೌಶೀಲ್ಯಾದಿ ಗುಣಗಳಿಂದ ಪರಿಪೂರ್ಣನಾದ ಶೇಷಶಾಯಿಯೇ! ನಿನ್ನ ಪಾದಗಳನ್ನು ಸೇರುವ ಪ್ರಕಾರವನ್ನು ನಾನು ಅರಿಯೆನು.

(೧೦) ತಾಳ್ತಾಮರೈಯಾನುನದುನ್ದಿಯಾನ್,
ವಾಳ್‌ಕೊಳ್ ನೀಳ್ ಮೞುವಾಳಿ ಯುನ್ನಾಕತ್ತಾನ್,
ಆಳರಾಯ್ ತ್ತೊೞುವಾರುಮಮರರ್‌ಕಳ್,
ನಾಳುಮೆನ್ ಪುಕೞ್‌ಕೋ ವುನಶೀಲಮೇ.

ಪ್ರ॥ ತಾಳತಾಮರೈಯಾನ್-ತಾಳುಗಳುಳ್ಳ ತಾವರೆಯಲ್ಲಿ ಹುಟ್ಟಿದ ಬ್ರಹ್ಮನು, ಉನದು ಉನ್ದಿಯಾನ್-ನಿನ್ನ ನಾಭಿಯನ್ನು ಆಶ್ರಯಿಸಿದವನು; ವಾಳ್‌ಕೊಳ್-ತೇಜಸ್ಸುಳ್ಳ, ನೀಳ್‌ಮೞು-ಮಹಾಪರಶುವನ್ನು, ಆಳಿ-ಧರಿಸಿರುವ ರುದ್ರನೂ, ಉನ್ ಆಕತ್ತಾನ್-ನಿನ್ನ ಶರೀರದಲ್ಲಿ ಸೇರಿದವನು; ಆಳರಾಯ್-ಶೇಷಭೂತರಾಗಿ, ತೊೞುವಾರುಮ್-ಸೇವಿಸುವವರೂ, ಅಮರರ್‌ಕಳ್ - ದೇವತೆಗಳು. ಉನಶೀಲಮೇ-(ಹೀಗೆ ನಿರವಧಿಕವಾದ) ನಿನ್ನ ಶೀಲವನ್ನೇ, ನಾಳುಮ್-ಪ್ರತಿದಿನವೂ (ಸರ್ವಕಾಲದಲ್ಲೂ), ಎನ್-ಏನು ಹೇಳಿ, ಪುಕೞ್‌ಕೋ - ಸ್ತೋತ್ರಮಾಡುವೆನು? (ಯಾವ ಪ್ರಕಾರದಲ್ಲೂ ಸ್ತೋತ್ರಮಾಡಲಾರೆನು—ಎಂದು ಭಾವವು.)

( ಸ-ಗಾ-ರ ॥ )—

ಪದ್ಮೋದ್ಭವೋಽಪಿ ತವ ನಾಭಿಸಮುದ್ಭವೋಽಸೌ !
ರುದ್ರಸ್ತ್ರಿಶೂಲಭೃದಯಂ ತವ ಪಾರ್ಶ್ವಭೂತಃ ।
ಶೇಷಾಶ್ಚ ದೇವನಿವಹಾಸ್ತವ ಸನ್ತಿ ಭಕ್ತಾಃ!
ಶೀಲಂ ತವಾನಿಶಮಹನ್ತು ಕಥಂ ಸ್ತವೀಮಿ ? ॥

ತಾ॥ ಪದ್ಮೋದ್ಭವನಾದ ಬ್ರಹ್ಮನು ನಿನ್ನ ನಾಭಿಯಲ್ಲಿ ಹುಟ್ಟಿದವನು. ತ್ರಿಶೂಲಾದಿ (ಪರಶು) ಧಾರಿಯಾದ ರುದ್ರನೂ ನಿನ್ನ ಶರೀರದಲ್ಲಿ ಸೇರಿದವನು. ಶೇಷಭೂತರಾಗಿ ನಿನ್ನನ್ನು ಸೇವಿಸುವವರು ದೇವತೆಗಳು (ನಿತ್ಯಸೂರಿಗಳು). ನಿರವಧಿಕವಾದ ನಿನ್ನ ಶೀಲವನ್ನೇ ಪ್ರತಿದಿನವೂ ನಾನು ಯಾವ ಪ್ರಕಾರದಲ್ಲಿ ಸ್ತುತಿಸುವೆನು?

(೧೧) ಶೀಲಮೆಲ್ಲೈಯಿಲಾನಡಿಮೇಲ್, ಅಣಿ
ಕೋಲನೀಳ್ ಕುರುಕೂರ್ ಚ್ಚಡಕೋಪನ್, ಶೊಲ್
ಮಾಲೈಯಾಯಿರತ್ತುಳ್ಳಿವೈ ಪತ್ತು ನೀಳ್
ಪಾಲರ್, ವೈಕುನ್ದಮೇಱುದಲ್ ಪಾನ್ಮೈಯೇ.

ಪ್ರ|| ಶೀಲಮ್ - ಶೀಲಗುಣಕ್ಕೆ, ಎಲ್ಲೈಯಿಲಾನ್ - ಎಲ್ಲೆಯಿಲ್ಲದವನ (ನಿರವಧಿಕ ಸೌಶೀಲ್ಯವುಳ್ಳವನ), ಅಡಿಮೇಲ್ - ಪಾದಗಳಮೇಲೆ, ಅಣಿ - ಅಲಂಕಾರವಾಗಿ ಸಮರ್ಪಿತವಾದ, ಕೋಲ - ದರ್ಶನೀಯವಾದ, ನೀಳ್ - ವಿಸ್ತೀರ್ಣವಾದ, ಕುರುಕೂರ್ - ಶ್ರೀ ಕುರುಕಾಪುರಿಯ, ಶಡಕೋಪನ್ - ಶ್ರೀ ಶಠಾರಿಮುನಿಯ, ಶೊಲ್ ಮಾಲೈ - ಸೂಕ್ತಿಮಾಲೆಯಾದ, ಆಯಿರತ್ತುಳ್ - ಸಹಸ್ರ ಪದ್ಯಾವಳಿಯಲ್ಲಿ, ಇವೈ ಪತ್ತುನೀಳ್ - ಈ ಹತ್ತು ಪದ್ಯಗಳ, ಪಾಲರ್ - ಅಭ್ಯಾಸವುಳ್ಳವರು, ವೈಕುನ್ದಮ್ - ಪರಮಪದವನ್ನು, ಏಱುದಲ್ - ಹತ್ತುವುದು, ಪಾನ್ಮೈ - ಸ್ವಭಾವಸಿದ್ಧವು (ನಿಶ್ಚಿತವಾದುದು).

( ಸ-ಗಾ-ರ || )--

ನಿಸ್ಸೀಮಶೀಲ-ಹರಿಪಾದಸರೋಜಯುಗ್ಮಂ
ಶೋತ್ರೀಕರಂ ಶಠಾರಿರಕರೋತ್ ಕುರುಕಾಪುರೀಶಃ |
ಸಾಹಸ್ರಸೂಕ್ತಿಸರಣಿಂ! ದಶಕಂ ತದೇತ-
ದ್ವೈಕುಣ್ಠಸದ್ಮಕರಂ ಪಠತಾಂ ಜನಾನಾಮ್ ||

ತಾ|| ನಿಸ್ಸೀಮಶೀಲನಾದ ಭಗವನ್ತನ ಪಾದಗಳಿಗೆ ಅಲಂಕಾರವಾಗಿ ಸಮರ್ಪಿಸಲ್ಪಟ್ಟ ಸ್ತುತಿರೂಪವಾದ, ಶ್ರೀ ಶಠಾರಿಮುನಿಯ ಸಹಸ್ರಪದ್ಯಾವಳಿಯಲ್ಲಿ ಈ ಹತ್ತು ಪದ್ಯಗಳ ಅಭ್ಯಾಸವುಳ್ಳವರು ಪರಮಪದವನ್ನು ಹತ್ತುವುದು ನಿಶ್ಚಿತವಾದುದು.

( ದ್ರ-ಉ-ಸಂ || )--

ನಾರಾಯಣೇ ಮಯಿ ಸತಿ ಸ್ವಭರಾರ್ಥಚಿನ್ತಾ
ನಾರ್ಹಾ ತವೇತಿ ವಿಭುನಾ ಬಹುಮಾನಭಾಜಾ |
ಆವಿಷ್ಕೃತಾಂ ನಿರವಧಿಂ ನಿಜಶೀಲವತ್ತಾ-
ಮನ್ಯಾದೃಶೀಮನುಬಭೂವ ಮುನಿಸ್ತೃತೀಯೇ ||

( ದ್ರ–ಉ–ತಾ–ರ || )—

ಸ್ವೈಕಶ್ರೀನಾಮವತ್ತ್ವಾಜ್ಜಗದುದಯಸುಸಂಸ್ಥಾಪನಾದ್ಯೈರ್ಹರಿತ್ವಾ-
ದ್ಧ್ಯಾನಾನೈಮೋಕ್ಷಸ್ಯ ಹೇಯಪ್ರತಿಭಟಘಟಕಶ್ರೀಣಿಸಮ್ಪತ್ತಿಮತ್ತ್ವಾತ್ |
ಪ್ರಹ್ಲಾದಾಹ್ಲಾದಕತ್ವಾದ್ವೃಷಗಿರಿಕಟಕೇ ಸನ್ನಿಧಾನಾದಿಕೃತ್ಯೈ-
ಶ್ಶರ್ವಾದೇಸ್ಸ್ವಾಙ್ಘ್ರಿದಾನಾದಕಥಿ ಯದುಪತಿ ಶ್ಶೀಲರತ್ನಾಕರೋಽಸೌ ||

(ಈ ತೃತೀಯದಶಕದ ಸಾರಾಂಶ—)

ಈ ಮೂರನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವದ್ಗುಣಾನುಭವವನ್ನು ಮಾಡಲು ತಮ್ಮಮನಸ್ಸಿಗೆ ಪ್ರೇರಿಸಿ, ಅವನ ನಾರಾಯಣತ್ವ–ಸೃಷ್ಟಿಸ್ಥಿತಿಲಯ ಕರ್ತೃತ್ವ–ಸಂಸಾರವ್ಯಾಧಿನಾಶಕದಿವ್ಯೌಷಧತ್ವ–ಪರಮಪದಭೋಗದಾತೃತ್ವ-ದಿವ್ಯತುಳಸೀಮಾಲಾಧರತ್ವ—ಅಮೃತಮಥನಕರತ್ವ–ನರಸಿಂಹತ್ವ–ವೇಂಕಟಾದ್ರೀಶ್ವರತ್ವ–ಸುಖಾರಾಧ್ಯತ್ವ–ಬ್ರಹ್ಮರುದ್ರಾದಿ ದೇವಮಣ್ಡಲ ಸೇವ್ಯತ್ವಾದಿ ಮಹಿಮೆಯನ್ನು ವರ್ಣಿಸಿ, ಈ ದಶಕ ಪಠನದಿಂದ ಪರಮಪದ ಪ್ರಾಪ್ತಿಯೆಂದು ನಿಶ್ಚಯಿಸಿ ಇರುತ್ತಾರೆ.

—:❖:—

ಶ್ರೀಃ

# ನವಮಶತಕದಲ್ಲಿ—ಚತುರ್ಥದಶಕ.

(ಮೈಯ್ಯಾರ್ಕರುಙ್ಕಣ್ಣಿ—)

(ಈ ದಶಕದಲ್ಲಿ—ಶ್ರೀಶಠಾರಿಮುನಿವರ್ಯರು ಶಙ್ಖಚಕ್ರಧಾರಿಯಾದ ಸರ್ವೇಶ್ವರನನ್ನು ಸಾಕ್ಷಾತ್ಕರಿಸಬೇಕೆಂದು ಆಶೆಪಟ್ಟು, ಅವನ ಅನುಭವಾತಿಶಯದಿಂದ ಸನ್ತುಷ್ಟರಾಗುತ್ತಾರೆ.)

---

(೧) ಮೈಯ್ಯಾರ್ ಕರುಙ್ಕಣ್ಣಿ ಕಮಲಮಲರ್ಪೋಲ್,
ಸೆಯ್ಯಾಳ್ ತಿರುಮಾರ್ವಿನಿಲ್ ಶೇರ್ ತಿರುಮಾಲೇ,
ವೆಯ್ಯಾರ್ ಶುಡರಾಳಿ ಶುರಿಶಙ್ಗಮೇನ್ದುಮ್
ಕೈಯ್ಯಾ ಉನ್ನೈ ಕ್ಕಾಣ ಕ್ಕರುದುಮೆನ್ ಕಣ್ಣೇ.

ಪ್ರ॥ ನೈ ಆರ್ – ಅಞ್ಜನದಿಂದ ಅಲಂಕೃತವಾದ, ಕರುಮ್‌ಕಣ್ – ನೀಲ ವರ್ಣವುಳ್ಳ ನೇತ್ರಗಳಿಂದ ಕೂಡಿದ, ಕಮಲಮಲರ್‌ಮೇಲ್ – ತಾವರೆ ಹೂವಿನ ಮೇಲೆ ವಾಸಮಾಡುವ, ಶೆಯ್ಯಾಳ್ – ಪದ್ಮವರ್ಣೆಯಾದ ಲಕ್ಷ್ಮೀದೇವಿಯು, ತಿರು ಮಾರ್ವಿನಿಲ್ ಶೇರ್-ವಕ್ಷಸ್ಥಲದಲ್ಲಿ ಸೇರುವಂತೆ, ತಿರುಮಾಲೇ-(ವ್ಯಾಮೋಹವುಳ್ಳ) ಶ್ರೀಯಃಪತಿಯಾದವನೇ, ಮೆಯ್ ಆರ್-ಸತ್ಯಾತ್ಮಶಕ್ತಿಯಿಂದ ಕೂಡಿದ, ಶುಡರ್-ಜ್ವಾಲೆಯುಳ್ಳ, ಆೞಿ-ಚಕ್ರವನ್ನೂ, ಶುರಿ – ರೇಖಾರೂಪವಾದ ಸುಳಿಗಳುಳ್ಳ, ಶಙ್ಗಮ್-ಶಙ್ಖವನ್ನೂ, ಏನ್ದುಮ್-ಧರಿಸಿರುವ, ಕೈಯ್ಯಾ-ಹಸ್ತಗಳುಳ್ಳವನೇ !, ಉನ್ನೈ-ನಿನ್ನನ್ನು, ಎನ್‌ಕಣ್ ನನ್ನ ಕಣ್ಣುಗಳು, ಕಾಣ-ಸದಾದರ್ಶನಮಾಡಲು, ಕರುದುಮ್-ಆಶೆಪಡುವುವು.

( ಸ-ಗಾ-ರ ॥ )—

ನೀಲಾಞ್ಜನಾಕ್ತನಯನಾಂ ಕಮಲೋದ್ಭವಾಂ ತಾಂ
ಲಕ್ಷ್ಮೀಂ ಸ್ವವಕ್ಷಸಿ ಬಿಭರ್ಷಿ ಹಿ ಪದ್ಮವರ್ಣಾಮ್ ।
ಶ್ರೀಮನ್! ಸುದರ್ಶನಸುಶಙ್ಖಧರಂ ಕರಾಭ್ಯಾಂ
ತ್ವಾಂ ದ್ರಷ್ಟುಮಿಚ್ಛತಿ ಸದಾ ಮಮ ನೇತ್ರಯುಗ್ಮಮ್ ॥

ತಾ॥ ನೀಲಾಂಜನಾಲಂಕೃತನಯನೆಯಾದ ಕಮಲವಾಸಿನಿಯಾದ ಪದ್ಮ ವರ್ಣೆಯಾದ ಲಕ್ಷ್ಮೀದೇವಿಯು ತನ್ನ ವಕ್ಷಸ್ಥಲದಲ್ಲಿ ಸೇರಿರುವಂತೆ ವ್ಯಾಮೋಹ ವುಳ್ಳ ಶ್ರೀಯಃಪತಿಯೇ ! ಶಙ್ಖಚಕ್ರಗಳನ್ನು ಹಸ್ತಗಳಿಂದ ಧರಿಸಿರುವವನೇ ! ನಿನ್ನನ್ನು ಸದಾದರ್ಶನಮಾಡಲು ನನ್ನ ಕಣ್ಣುಗಳು ಆಶೆಪಡುತ್ತಿವೆ.

(೨) ಕಣ್ಣೇ ಯುನ್ನೈ ಕ್ಕಾಣ ಕ್ಕರುದಿ, ಎನ್ ನೆಞ್ಜಮ್,
ಎಣ್ಣೇ ಕೊಣ್ಡ ಶಿನ್ದೈಯದಾಯ್ ನಿನ್ಱಿಯಮ್ಬುಮ್,
ವಿಣ್ಣೋರ್ ಮುನಿವರ್ಕ್ಕೆನ್ಱುಮ್ ಕಾಣ್ಬರಿಯಾಯೈ,
ನಣ್ಣಾದೊೞಿಯೇನೆನ್ಱು ನಾನಿನ್ಱರ್ಪ್ಪೇನೇ.

ಪ್ರ॥ ಕಣ್ಣೇ-ನನಗೆ ದೃಷ್ಟಿಯಂತೆ ಶ್ಲಾಘ್ಯತಮನೇ !, ಉನ್ನೈ-ನಿನ್ನನ್ನು, ಕಾಣ-ಸದಾ ದರ್ಶನಮಾಡಲು, ಕರುದಿ-ಅಪೇಕ್ಷಿಸಿ, ಎನ್ ನೆಞ್ಜಮ್-ನನ್ನ ಮನಸ್ಸು, ಎಣ್ಣೇ ಕೊಣ್ಡ – ಬಹುಸಂಖ್ಯೆಗಳುಳ್ಳ, ಶಿನ್ದೈಯಾಯ್-ಮನೋರಥಗಳುಳ್ಳದು ದಾಗಿ, ನಿನ್ಱು-ನಿಂತು, ಇಯಮ್ಬುಮ್-ಕೂಗುತ್ತಿದೆ. ನಾನ್-ನಾನು, ವಿಣ್ಣೋರ್-ಬ್ರಹ್ಮಾದಿ ದೇವತೆಗಳಿಗೂ, ಮುನಿವರ್ಕ್ಕು-ಸನಕಾದಿ ಮುನಿಗಳಿಗೂ, ಎನ್ಱುಮ್-

ಯಾವಾಗಲೂ, ಕಾಣ್ಬು-ಕಾಣುವುದಕ್ಕೆ, ಅರಿಯಾಯ್-ಅಶಕ್ಯನಾದ ನಿನ್ನನ್ನು, ನಣ್ಣಾದು ಒೞಿಯೇನ್-ಆಶ್ರಯಿಸದೆ ಇರಲಾರೆನು, ಎನ್ಱು-ಎಂದು, ಅೞೈಪ್ಪೇನೇ-ತ್ವರೆಯಿಂದ ಕರೆಯುತ್ತಿದೇನೆ.

( ಸ-ಗಾ-ರ || )—

ಮನ್ನೇತ್ರರೂಪ! ತವ ದರ್ಶನಕಾಂಕ್ಷಯೇದಂ
ಚಿತ್ತಂ ಮನೋರಥಶತೈರ್ಮಮ ಸಾನುಲಾಪಮ್ |
ದೇವಾದಿಭಿಶ್ಚ ಮುನಿಭಿಶ್ಚ ನ ಶಕ್ಯತೇ ಯೋ
ದ್ರಷ್ಟುಂ ತವಿಮಾಪ್ತುರಹಮದ್ಯ ಕಿಲಾಹ್ವಯಾಮಿ ||

ತಾ|| ನನಗೆ ನೇತ್ರಪ್ರಾಯನಾದವನೇ! ನಿನ್ನ ದರ್ಶನಕ್ಕಾಗಿ ನನ್ನ ಮನಸ್ಸು ಬಹು ಮನೋರಥಗಳುಳ್ಳದುದಾಗಿ ನಿಂತು ಮೊರೆಯಿಡುತ್ತಿದೆ. ಬ್ರಹ್ಮಾದಿ ದೇವತೆಗಳಿಗೂ ಸನಕಾದಿ ಮುನಿಗಳಿಗೂ ಕಾಣಲು ಅಶಕ್ಯನಾದ ನಿನ್ನನ್ನು ನಾನು ಹೊಂದಲು ಅಪೇಕ್ಷಿಸಿ ತ್ವರೆಯಿಂದ ಕರೆಯುತ್ತಿದೇನೆ.

(೩) ಅೞೈಕ್ಕಿನ್ಱವಡಿನಾಯೇನ್ ನಾಯ್ ಕೂೞೈ ವಾಲಾಲ್,
ಕುೞೈಕ್ಕಿನ್ಱದು ಪೋಲ ವೆನ್ನುಳ್ಳಮ್ ಕುೞೈಯುಮ್,
ಮೞೈಕ್ಕನ್ಱು ಕುನ್ಱಮೆಡುತ್ತಾನಿರೈ ಕಾತ್ತಾಯ್,
ಪಿೞೈಕ್ಕಿನ್ಱದರುಳೆನ್ಱು ಪೇದುಱುವನೇ.

ಪ್ರ|| ಅೞೈಕ್ಕಿನ್ಱ-ಆದರಾತಿಶಯದಿಂದ ಕರೆಯುತ್ತಿರುವ, ಅಡಿ-ಶೇಷಭೂತನಾದ, ನಾಯೇನ್-ಅಲ್ಪನಾದ ನಾನು, ಎನ್ - ನನ್ನ, ಉಳ್ಳಮ್ - ಮನಸ್ಸು, ನಾಯ್-ನಾಯಿಯು, ಕೂೞೈವಾಲಾಲ್ - ವಕ್ರವಾದ ತನ್ನ ಬಾಲದಿಂದ, ಕುೞೈಕ್ಕಿನ್ಱದು ಪೋಲ-ಕೂಗಿ ತನ್ನ ಭಾವವನ್ನು ತಿಳಿಸುವಂತೆ, ಕುೞೈಯುಮ್-(ನಿನ್ನ ವಿಷಯದಲ್ಲಿ) ಶಿಥಿಲವಾಗುತ್ತಿದೆ. ಅನ್ಱು - ಆಗ (ಇನ್ದ್ರನು ಪ್ರತಿಕೂಲನಾದಾಗ), ಮೞೈಕ್ಕು-ಮಳೆಗೋಸ್ಕರ, ಕುನ್ಱಮ್-ಪರ್ವತವನ್ನು, ಎಡುತ್ತು-ಎತ್ತಿ, ಆನಿರೈ-ಪಶುಸಂಘವನ್ನು, ಕಾತ್ತಾಯ್ - ರಕ್ಷಿಸಿದವನೇ, ಅರುಳ್ - (ನಿನ್ನ) ಕೃಪೆಯು, ಪಿೞೈಕ್ಕಿನ್ಱದು-(ನನ್ನ ವಿಷಯದಲ್ಲಿ) ತಪ್ಪಿಹೋಗುತ್ತಿದೆ, ಎನ್ಱು-ಎಂದು, ಪೇದುಱುವನೇ—ಮನಃಕ್ಷೋಭವನ್ನು ಹೊಂದುತ್ತಿದೇನೆ.

( ಸ-ಗಾ-ರ || )—

ದಾಸಾಯುತಸ್ಯ ಮಮ ಮಾನಸಮಸ್ತಿ ಖಿನ್ನಂ!
ಭಾವಂ ವ್ಯನಕ್ತಿ ಚ ಯಥಾ ಶುನಕಸ್ಸ್ವಪುಚ್ಛಾತ್ |
ಗೋವರ್ಧನೋದ್ಧರಣತಃ ಪಶುಪಾಲಕಸ್ತ್ವಂ!
ಕಿಂ ತೇ ದಯಾ ತು ನ ಭವೇನ್ಮಯಿ ಚೇತಿ ದೂಯೇ ||

ತಾ|| ಅತ್ಯಾದರದಿಂದ ದಾಸಭೂತನಾದ ನನ್ನ ಮನಸ್ಸು (ನಾಯಿಯು ತನ್ನ ವಕ್ರವಾದ ಬಾಲದಿಂದ ಕೂಗಿ ತನ್ನ ಭಾವವನ್ನು ಯಜಮಾನನಿಗೆ ತಿಳಿಸುವಂತೆ) ನಿನ್ನ ವಿಷಯದಲ್ಲಿ ಶಿಥಿಲವಾಗುತ್ತಿದೆ. ಆ ಪೂರ್ವಕಾಲದಲ್ಲ ಮಳೆಯನ್ನು ತಡೆಯುವುದಕ್ಕೋಸ್ಕರ ಪರ್ವತವನ್ನು ಎತ್ತಿ ಗೋಸಂಘವನ್ನು ರಕ್ಷಿಸಿದವನೇ! ನಿನ್ನ ಕೃಪೆಯು ನನ್ನ ವಿಷಯದಲ್ಲಿ ತಪ್ಪಿಹೋಗುತ್ತಿದೆಯೆಂದು ದುಃಖಿಸುತ್ತಿದೇನೆ.

(೪) ಉಱುವದಿದುವೆನ್ಱುನಕ್ಕಾಳ್ಪಟ್ಟು, ನಿನ್ಕಣ್
ಪೆಱುವದೆದು ಕೊಲೆನ್ಱು ಪೇದ್ಯೆಯೇನ್ ನೆಞ್ಜಮ್,
ಮಱುಕಲ್ ಶೆಯ್ಯುಮ್ ವಾನವರ್ ದಾನವರ್ಕ್ಕೆನ್ಱುಮ್,
ಅಱಿವದರಿಯ ವರಿಯಾಯ ವಮ್ಮಾನೇ.

ಪ್ರ|| ವಾನವರ್-ದೇವತೆಗಳಿಗೂ, ದಾನವರ್ಕ್ಕು-ದಾನವರಿಗೂ, ಎನ್ಱುಮ್-ಯಾವಾಗಲೂ, ಅಱಿವದು ಅರಿಯ-ತಿಳಿಯಲಶಕ್ಯನಾದ, ಅರಿಯಾಯ-ನರಸಿಂಹ ರೂಪಿಯಾದ, ಅಮ್ಮಾನೇ-ಸ್ವಾಮಿಯೇ, ಇದು-ಈ ನನ್ನ ದಾಸ್ಯವೇ, ಉಱುವದು-ಉದ್ದೇಶ್ಯವು, ಎನ್ಱು-ಎಂದು, ಉನಕ್ಕು-ನಿನಗೆ, ಆಳ್ಪಟ್ಟು-ದಾಸಭೂತನಾಗಿ, ನಿನ್ಕಣ್-ನಿನ್ನ ಸಾನ್ನಿಧ್ಯದಲ್ಲಿ, ಪೆಱುವದು-(ನಾನು) ಪಡೆಯುವುದು, ಎದುಕೊಲ್-ಯಾವುದೋ, ಎನ್ಱು-ಎಂದು, ಪೇದ್ಯೆಯೇನ್-ಅಜ್ಞನಾದ ನನ್ನ, ನೆಞ್ಜಮ್-ಮನಸ್ಸು, ಮಱುಕಲ್ ಶೆಯ್ಯುಮ್-ಕ್ಲೇಶಪಡುತ್ತಿದೆ.

( ಸ-ಗಾ-ರ || )—

ದೇವಾದಿದಾನವಗಣಸ್ಯ ಚ ನಾರಸಿಂಹ!
ತ್ವಂ ದುರ್ಗಮೋಽಸಿ! ತವ ಶೇಷತಯೈವ ಧನ್ಯಾಃ |
ತೇಽಪಿ ಚ ದಾಸ್ಯವಿಭವಾತ್ಸ್ವವ ಕಿಂ ಭಜಾಮೋ
ಭ್ರಾನ್ತ್ವಾ ವಯಂ ತ್ವಿತಿ ಮನೋ ಮಮ ಸೀದತೀದಮ್ ||

ತಾ॥ ದೇವತೆಗಳಿಗೂ ದಾನವರಿಗೂ ತಿಳಿಯಲಶಕ್ಯನಾದ ನರಸಿಂಹರೂಪಿಯಾದ ಸ್ವಾಮಿಯೇ! ಈ ನನ್ನ ದಾಸ್ಯವೇ ಉದ್ದೇಶ್ಯವೆಂದು ನಾನು ದಾಸಭೂತನಾಗಿ ನಿನ್ನ ಸಾನ್ನಿಧ್ಯದಲ್ಲಿ ಯಾವುದನ್ನು ಪಡೆಯುವೆನೋ?—ಎಂದು ಅಜ್ಞನಾದ ನನ್ನ ಮನಸ್ಸು ಕ್ಲೇಶಪಡುತ್ತಿದೆ.

(೫) ಅರಿಯಾಯುವವಮ್ಮಾನ್ನೈ ಯಮರರ್ ಪಿರಾನ್ನೈ,
ಪೆರಿಯಾನ್ನೈ ಪ್ಪಿರಮನ್ನೈ ಮುನ್ ಪಡೈತ್ತಾನ್ನೈ
ವೆರಿವಾಳರವಿನಣೈ ಪ್ಪಳ್ಳಿಕೊಳ್‌ಕಿನ್ನ,
ಕರಿಯೋನ್‌ಕಳಲ್ ಕಾಣ ಕ್ಕರುದುಮೆನ್ ಕರುತ್ತೇ.

ಪ್ರ॥ ಅರಿ ಆಯ – ವಿರೋಧಿನಿವರ್ತಕನಾದ, ಅಮ್ಮಾನ್ನೈ–ಸ್ವಾಮಿಯನ್ನು, ಅಮರರ್–ನಿತ್ಯಸೂರಿಗಳಿಗೆ, ಪಿರಾನ್ನೈ – ನಿರ್ವಾಹಕನಾದವನನ್ನು, ಪೆರಿಯಾನ್ನೈ–ಮಾಹಾತ್ಮ್ಯವುಳ್ಳವನನ್ನು, ಮುನ್ ಪಿರಮನ್ನೈ ಪಡೈತ್ತಾನ್ನೈ–ಮೊದಲು ಬ್ರಹ್ಮನನ್ನು ಸೃಷ್ಟಿಸಿದವನನ್ನು, ವರಿ–ರೇಖೆಗಳನ್ನೂ, ವಾಳ್–ಕಾನ್ತಿಯನ್ನೂ ಉಳ್ಳ, ಅರವಿನ್ ಅಣೈ – ಶೇಷರೂಪಿಯಾದ ಶಯನದಲ್ಲಿ, ಪಳ್ಳಿಕೊಳ್‌ಕಿನ್ನ – ನಿದ್ರೆಮಾಡುತ್ತಿರುವ, ಕರಿಯೋನ್ – ಶ್ಯಾಮಳಮೂರ್ತಿಯನ್ನು, ಕಳಲ್–ಅವನ ಪಾದಗಳು ಮೊದಲಾಗಿ, ಕಾಣ-ಕಾಣಬೇಕೆಂದು, ಕರುತ್ತೇ-(ನನ್ನ) ಬುದ್ಧಿಯು, ಕರುದುಮ್-ಆಶೆಪಡುತ್ತಿದೆ.

( ಸ–ಗಾ–ರ ॥ )—

ದುಷ್ಟಾತ್ಮನಾಶಮಮರಾಧಿಪತಿಂ ಪ್ರಭುಂ ನಃ
ಸೃಷ್ಟೇಃ ಪುರೈವ ಚತುರಾನನಸರ್ಗಹೇತುಮ್ ।
ಶೇಷಶಾಯಿನಮುದಾರಸುನೀಲವರ್ಣಂ
ತ್ವಾಂ ತ್ವತ್ಪದಾಬ್ಜಮಪಿ ಮೇಽಸ್ತಿ ದಿದೃಕ್ಷು ಚಿತ್ತಮ್ ॥

ತಾ॥ ವಿರೋಧಿನಿವರ್ತಕನಾಗಿಯೂ, ನಿತ್ಯಸೂರೀಶ್ವರನಾಗಿಯೂ, ಮಹಾಮಹಿಮನಾಗಿಯೂ, ಚತುರ್ಮುಖಸೃಷ್ಟಿಕರ್ತನಾಗಿಯೂ, ಶೇಷಶಾಯಿಯಾಗಿಯೂ, ಶ್ಯಾಮಳಮೂರ್ತಿಯಾಗಿಯೂ ಇರುವ ನಿನ್ನ ಪಾದಗಳನ್ನೂ ನಿನ್ನನ್ನೂ ಕಾಣಬೇಕೆಂದು ನನ್ನ ಮನಸ್ಸು ಆಶೆಪಡುತ್ತಿದೆ.

(೬) ಕರುತ್ತೇ ಯುನ್ನೈ ಕ್ಕಾಣಕ್ಕರುದಿ, ಎನ್ ನೆಞ್ಜ
ತ್ತಿರುತ್ತಾಕ ವಿರುತ್ತಿನೇನ್ ತೇವರ್‌ಕಳ್ಕೆಲ್ಲಾಮ್,
ವಿರುತ್ತಾ ವಿಳಙ್ಗುಮ್ ಶುಡರ್‌ಚ್ಚೋದಿಯುಯರ
ತ್ತೊರುತ್ತಾ, ಉನ್ನೈಯುಳ್ಳುಮೆನ್ನುಳ್ಳಮುಕನ್ದೇ.

ಪ್ರ|| ಕರುತ್ತೀ-(ನನಗೆ) ಮುಖ್ಯೋದ್ದೇಶ್ಯನಾದವನೇ, ಉನ್ನೈ-ನಿನ್ನನ್ನು, ಕಾಣ-ಕಾಣಬೇಕೆಂದು, ಕರುದಿ-ಆಶೆಪಟ್ಟು, ಎನ್ ನೆಞ್ಜತ್ತು-ನನ್ನ ಮನಸ್ಸಿನಲ್ಲಿ, ಇರುತ್ತು, ಆಕ-ಸ್ಥಿರವಾಗಿ, ಇರುತ್ತಿನೇ-(ನಿನ್ನನ್ನು) ಇಟ್ಟುಕೊಂಡೆನು, ತೇವರ್ ಕಟ್ಕೆಲ್ಲಾಮ್-ನಿತ್ಯಸೂರಿಗಳಿಗೆಲ್ಲಾ, ವಿರುತ್ತಾ-(ವೃದ್ಧನಾದ) ಅದಿಭೂತನಾದ ಸ್ವಾಮಿಯೇ, ವಿಳಙ್ಗುಮ್ - ಪ್ರಕಾಶಿಸುವ, ಶುಡರ್ - ಪ್ರಭೆಯುಳ್ಳ, ಶೋದಿ-ತೇಜೋಮಯನಾಗಿ, ಉಯರತ್ತು - ಪರಮಪದದಲ್ಲಿ, ಒರುತ್ತಾ - ಅದ್ವಿತೀಯನಾದವನೇ, ಎನ್ ಉಳ್ಳಮ್-ನನ್ನ ಅನ್ತಃಕರಣವು, ಉನ್ನೈ-ನಿನ್ನನ್ನು, ಉಕನ್ದು-ಅತ್ಯನ್ತ ಪ್ರೀತಿಯೊಡನೆ, ಉಳ್ಳುಮ್-ಅನುಭವಿಸುತ್ತಿದೆ.

( ಸ-ಗಾ-ರ || )—

ಮತ್ಪ್ರಾಪ್ಯಭೂತ! ತವ ದರ್ಶನಕಾಂಕ್ಷಯಾ ತ್ವಾಂ
ಚಿತ್ತೇ ಮಮೈವ ಸುದೃಢಂ ವಿನಿವೇಶ್ಯ ಮೋದೇ |
ದೇವಾಧಿದೇವ! ಮಹಸಾ ದಿವಿ ಚಾದ್ವಿತೀಯ!
ತ್ವಾಂ ಮೇ ಮನೋಽನುಭವತಿ ಪ್ರಿಯಮಾದಿ ತತ್ತ್ವಮ್ ||

ತಾ|| ನನಗೆ ಪ್ರಾಪ್ಯನಾದ ಸ್ವಾಮಿಯೇ! ನಿನ್ನನ್ನು ಕಾಣಬೇಕೆಂದು ಆಶೆ ಪಟ್ಟು ನಿನ್ನನ್ನು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ಇಟ್ಟುಕೊಂಡೆನು. ನಿತ್ಯಸೂರೀಶ್ವರನೇ! ದಿವ್ಯತೆಜೋಮಯನಾಗಿ ಪರಮಪದದಲ್ಲಿ ಅದ್ವಿತೀಯನಾಗಿ ಪ್ರಕಾಶಿಸುವವನೇ! ನನ್ನ ಅನ್ತಃಕರಣವು ನಿನ್ನನ್ನು ಅತ್ಯನ್ತ ಪ್ರೀತಿಯಿಂದ ಅನುಭವಿಸುತ್ತಿದೆ.

(೭) ಉಕನ್ದೇ ಯುನ್ನೈ ಯುಳ್ಳುಮೆನ್ನುಳ್ಳತ್ತು, ಅಕಮ್ಪಾಲ್
ಅಕನ್ತಾನಮರ್ನ್ದೇ ಯಿಡಙ್ಕೊಣ್ಡ ವಮಲಾ,
ಮಿಕುಮ್ ತಾನವನ್ ಮಾರ್ವಕಲಮಿರುಕೂಱಾ,
ನಕನ್ತಾಯ್ ನರಶಿಙ್ಗಮದಾಯ ವುರುವೇ.

ಪ್ರ|| ಅಕಮ್ ಪಾಲ್-ಹೃದಯದಲ್ಲಿ, ಅಮರ್ನ್ದೇ-ಹೊಂದಿಕೊಂಡೇ, ಇಡಮ್ ಕೊಣ್ಡ-(ತನಗೆ) ಸ್ಥಾನವನ್ನು ಮಾಡಿಕೊಂಡಿರುವ, ಅಮಲಾ-ದೋಷರಹಿತನೇ!, ಮಿಕುಮ್-ವರಬಲ ಭುಜಬಲಗಳಿಂದ ಕೊಬ್ಬಿ ಇರುವ, ತಾನವನ್-ದಾನವನಾದ ಹಿರಣ್ಯಾಸುರನ, ಅಕಲಮ್-ವಿಶಾಲವಾದ, ಮಾರ್ವು-ವಕ್ಷಸ್ಥಲವನ್ನು, ಇರು ಕೂಱು ಆ-ಎರಡು ಸೀಳಾಗುವಂತೆ, ನಕಮ್-ಉಗುರುಗಳನ್ನು, ತಾಯ್-ಚೆನ್ನಾಗಿ ಒಳಗೆ ವ್ಯಾಪಿಸಿಹೋಗುವಂತೆ ಮಾಡಿದ, ನರಶಿಙ್ಗಮದು ಆಯ-ನರಸಿಂಹವಾದ, ಉರುವೇ - ರೂಪವನ್ನು ಉಳ್ಳವನೇ!, ಎನ್-ನನ್ನ, ಉಳ್ಳತ್ತು - ಹೃದಯದ,

ಅಕವ್ಪಾಲ್-ಅನ್ತರಜ್ಗವು, ಉನ್ನೈ-ನಿನ್ನನ್ನು, ಉಕನ್ದೇ-ಪ್ರೀತಿಯೊಡನೆಯೇ, ಉಳ್ಳುಮ್-ಅನುಭವಿಸುತ್ತಿದೆ.

( ಸ-ಗಾ-ರ || )—

ವಚ್ಚಿತ್ತವಾಸ! ವಿಮಲ! ಪ್ರಬಲಂ ಚ ದೈತ್ಯಂ
ವಕ್ಷೋವಿದಾರಣಮುಖಾನ್ನಖತೋ ವಿನಾಶ್ಯ |
ತ್ವಂ ನಾರಸಿಂಹವಪುಷಃ ಕಿಲ ಲೋಕಪಾಲ-
ಸ್ತ್ವಾಂ ಮೇಽನ್ತರಙ್ಗಮನುಭೂಯ ಚಕಾಸ್ತಿ ಹೃಷ್ಟಮ್ ||

ತಾ|| ನನ್ನ ಹೃದಯದಲ್ಲಿ ವಾಸಮಾಡಿಕೊಂಡಿರುವ ದೋಷರಹಿತನಾದ ಸ್ವಾಮಿಯೇ! ಪ್ರಬಲ ದಾನವನಾದ ಹಿರಣ್ಯಾಸುರನ ವಕ್ಷಸ್ಸ್ಥಲವನ್ನು ನಖಗಳಿಂದ ಸೀಳಿದ ನರಸಿಂಹಮೂರ್ತಿಯೇ! ನನ್ನ ಅನ್ತರಜ್ಗವು ನಿನ್ನನ್ನೇ ಪ್ರೀತಿಯೊಡನೆ ಅನುಭವಿಸುತ್ತಿದೆ.

(೮) ಉರುವಾಕಿಯ ಆಱುಶಮಯಙ್ಗಳ್ಕ್ಕೆಲ್ಲಾಮ್,
ಪೊರುವಾಕಿ ನಿನ್ಱಾನವನೆಲ್ಲಾ ಪ್ಪೊರುಳ್ಕ್ಕುಮ್,
ಅರುವಾಕಿಯ ವಾದಿಯೈ ತ್ತೇವರ್‍ಕಳ್ಕ್ಕೆಲ್ಲಾಮ್,
ಕರುವಾಕಿಯ ಕಣ್ಣನೈ ಕ್ಕಣ್ಡುಕೊಣ್ಡೇನೇ.

ಪ್ರ|| ಉರುವಾಕಿಯ-ಒಂದು ಶಾಸ್ತ್ರರೂಪವಾಗಿ ತೋರುವ, ಆಱುಶಮಯಙ್ಗಳ್ಕ್ಕ ಎಲ್ಲಾಮ್-ಚಾರ್ವಾಕ ಬೌದ್ಧ ಕ್ಷಪಣಕ ವೈಶೇಷಿಕ ಸಾಂಖ್ಯ ಪಾಶುಪತ ಮತಗಳಿಗೆಲ್ಲಾ, ಪೊರುವಾಕಿ-ಪ್ರತಿಭಟನಾಗಿ, ನಿನ್ಱಾ-ನಿಂತವನು, ಅವ್ನ-ಅವನು, ಎಲ್ಲಾ ಪ್ಪೊರುಳ್ಕ್ಕುಮ್-ಸಕಲ ಪದಾರ್ಥಗಳಿಗೂ, ಅರುವಾಕಿಯ-ಅನ್ತರ್ಯಾಮಿಯಾದ, ಆದಿಯೈ-ಆ ಕಾರಣಭೂತನನ್ನು, ತೇವರ್‍ಕಳ್ಕ್ಕ ಎಲ್ಲಾಮ್-ದೇವತೆಗಳಿಗೆಲ್ಲಾ; ಕರುವಾಕಿಯ--ಕರ್ತನಾದ, ಕಣ್ಣನೈ-ಆಶ್ರಿತರಕ್ಷಣಕ್ಕಾಗಿ (ಗೀತಾಚಾರ್ಯನಾದ) ಕೃಷ್ಣನಾಗಿ ಅವತರಿಸಿದವನನ್ನು, ಕಣ್ಡುಕೊಣ್ಡೇನೇ-(ನಾನು) ಕಣ್ಡು ಅನುಭವಿಸಿದೆನಪ್ಪ!

( ಸ-ಗಾ-ರ || )—

ಏಕೀಭವತ್ಪ್ರಬಲಷಣ್ಮತಭಙ್ಗಕಂ ತಂ
ಸರ್ವಾನ್ತರಾತ್ಮಕಮನಾದಿ ಮುದಾರಶೀಲಮ್ |
ದೇವಾದಿಕಾರಣಮಹಂ ಪುರುಷೋತ್ತಮಂ ಶ್ರೀ
ಕೃಷ್ಣಂ ಮಮ ಪ್ರಿಯಮಿಹಾಸ್ಮಿ ವಿಲೋಕ್ಯ ಧನ್ಯಃ ||

ತಾ|| ಆರುವಿಧವಾದ ಚಾರ್ವಾಕಾದಿ ದುರ್ಮತಗಳನ್ನು ಧ್ವಂಸಮಾಡಿ ಸರ್ವಾನ್ತರ್ಯಾಮಿಯಾಗಿ ನಿಂತಿರುವ ಆದಿಕಾರಣಭೂತನಾಗಿಯೂ ಸರ್ವ ದೇವಾಧಿದೇವನಾಗಿಯೂ ಇರುವ ಶ್ರೀಕೃಷ್ಣನನ್ನು ನಾನು ಕಂಡು ಅನುಭವಿಸಿ ಧನ್ಯನಾಗಿದೇನೆ.

(೯) ಕಣ್ಣಾರ ಕೊಣ್ಡೇನ್ ಕಣ್ಣಿಣೈಯಾರ ಕ್ಕಳಿತ್ತು,
ಪಣ್ಡೈ ವಿನೈಯಾಯಿನ ಪಱ್ಱೋಡಱುತ್ತು,
ತೊಣ್ಡರ್ಕ್ಕಮುದುಣ್ಣ ಚ್ಚೊನ್ಮಾಲೈಕಳ್ ಶೊನ್ನೇನ್,
ಅಣ್ಡತ್ತಮರರ್ ಪೆರುಮಾನಡಿಯೇನೇ.

ಪ್ರ|| ಎನ್ ಕಣ್ ಇಣೈ-ನನ್ನ ಕಣ್ಣುಗಳೆರಡೂ, ಆರ-ತುಂಬುವಂತೆ, ಕಣ್ಡು ಕೊಣ್ಡು-ನೋಡಿ ನೋಡಿ, ಕಳಿತ್ತು-ಸನ್ತೋಷಿಸಿ, ಪಣ್ಡೈ-ಅನಾದಿಸಿದ್ಧವಾದ, ವಿನೈಯಾಯಿನ – ಪಾಪಗಳನ್ನೆಲ್ಲಾ, ಪಱ್ಱೋಡು-ಸವಾಸನವಾಗಿ, ಅಱುತ್ತು-ನಾಶಪಡಿಸಿ, ಅಣ್ಡತ್ತು-ಪರಮಪದದಲ್ಲಿ, ಅಮರರ್ ಪೆರುಮಾನ್-ನಿತ್ಯಸೂರೀಶ್ವರನಿಗೆ, ಅಡಿಯೇನ್-ನಿತ್ಯಕಿಙ್ಕರನಾದ ನಾನು, ತೊಣ್ಡರ್ಕ್ಕು – ಅವನ ಭಕ್ತರಿಗೆ, ಅಮುದು ಉಣ್ಣ-ಅಮೃತದಂತೆ ಭೋಗ್ಯವಾಗುವಹಾಗೆ, ಶೊಲ್ ಮಾಲೈಕಳ್-ಸೂಕ್ತಿಮಾಲೆಗಳನ್ನು, ಶೊನ್ನೇನ್-ರಚಿಸಿ ಇರುತ್ತೇನೆ.

( ಸ–ಗಾ–ರ )—

ನಾಥಂ ವಿಲೋಕ್ಯ ಮಮ ಲೋಚನಯುಗ್ಮತೋಽಹಂ
ಸನ್ತುಷ್ಟ ಏವ ಸಕಲಾಘವಿನಾಶತೋಽದ್ಯ |
ಸೂರೀಶ್ವರಂ ದಿವಿಭವಂ ಪ್ರತಿ ದಾಸಭೂತೋ
ಭಕ್ತಾಮೃತಂ * ವ್ಯರಚಯಂ ಮಮ ಸೂಕ್ತಿಹಾರಮ್ ||

ತಾ|| ನನ್ನ ಕಣ್ಣುಗಳೆರಡೂ ಪೂರ್ಣವಾಗಿ ಅನುಭವಿಸುವಂತೆ ನನ್ನ ಸ್ವಾಮಿಯನ್ನು ನೋಡಿ ನೋಡಿ ಸನ್ತೋಷಿಸಿ, ಅನಾದಿ ಪಾಪಗಳನ್ನೆಲ್ಲಾ ಧ್ವಂಸಮಾಡಿ, ಪರಮಪದನಾಥನಾದ ನಿತ್ಯಸೂರೀಶ್ವರನಿಗೆ ದಾಸಭೂತನಾದ ನಾನು ಭಕ್ತರಿಗೆ ಅಮೃತಪ್ರಾಯವಾದ ಸೂಕ್ತಿಮಾಲೆಗಳನ್ನು ರಚಿಸಿ ಇರುತ್ತೇನೆ.

* ಇಲ್ಲಿ ಶ್ರೀ ಶಠಾರಿಮುನಿವರ್ಯರು ತಮ್ಮ ಪ್ರಬನ್ಧವನ್ನು ಭಕ್ತಾಮೃತವೆಂದು ತಾವೇ ಪ್ರಶಂಸಿಸಿ ಇರುವುದರಿಂದ ತನಿಯನ್ ಪದ್ಯದಲ್ಲೂ "ಭಕ್ತಾಮೃತಂ ವಿಶ್ವಜನಾನುಮೋದನಂ" ಎಂದು ಇದೆ.

(೧೦) ಅಡಿಯಾನಿವನೆನ್ರಿನಕ್ಕಾರರುಳ್ ಶೆಯ್ಯುಮ್,
ನೆಡಿಯಾನೈ ನಿತ್ತ್ಯಪ್ಪುಕಳ್ಳಮ್ ತ್ತ್ರ ಪ್ಪುಳ್ಳಿನ್
ಕೊಡಿಯಾನೈ, ಕುನ್ರಾಮಲುಲಕಮಳನ್ದ—
ಅಡಿಯಾನೈ, ಅಡ್ಡೆನ್ದಡಿಯೇನುಯ್ನ್ದವಾಱೇ.

ಪ್ರ॥ ಇವನ್—ಇವನು, ಅಡಿಯಾನ್ ಎನ್ರು—ನಮಗೆ ದಾಸನು ಎಂದು, ಎನಕ್ಕು—ನನಗೆ, ಆರ್—ಪರಿಪೂರ್ಣವಾದ, ಅರುಳ್—ಕೃಪೆಯನ್ನು, ಶೆಯ್ಯುಮ್—ಮಾಡುವ, ನೆಡಿಯಾನೈ – ಸರ್ವೇಶ್ವರನನ್ನು, ನಿತ್ತ್ಯ—ಈ ರಕ್ಷಣಕ್ಕೆ ತಕ್ಕಂತೆ ಸಮೃದ್ಧವಾದ, ಪುಕಳ್—ಕೀರ್ತಿಯುಳ್ಳ, ಅಮ್ ಶಿತ್ತ್ಯ—ರಮ್ಯವಾದ ರೆಕ್ಕೆಗಳುಳ್ಳ, ಪುಳ್ಳಿನ್ – ಗರುಡ ಪಕ್ಷಿಯನ್ನು, ಕೊಡಿಯಾನೈ—ಧ್ವಜವಾಗಿ ಉಳ್ಳವನನ್ನು, ಕುನ್ರಾಮಲ್—ಅನ್ಯಾಶ್ರಯ ವೆಂಬ ದೋಷವಿಲ್ಲದ ಹಾಗೆ, ಉಲಕಮ್ ಅಳನ್ದ—ಲೋಕವನ್ನೆಲ್ಲಾ ಅಳೆದುಕೊಂಡ, ಅಡಿಯಾನೈ—ಪಾದಗಳುಳ್ಳವನನ್ನು, ಅಡ್ಡೆನ್ದು—ಆಶ್ರಯಿಸಿ, ಅಡಿಯೇನ್—ದಾಸಭೂತನಾದ ನಾನು, ಉಯ್ನ್ದ ಆಱ್—ಉಜ್ಜೀವಿಸಿದ ಪ್ರಕಾರವು ಎಂತಹುದೋ !

( ಸ–ಗಾ–ರ )—

ದಾಸೋಽಯಮಸ್ತಿ ಹಿ ಮಮೇತಿ ಕೃಪಾಂ ಚ ಪೂರ್ಣಾಂ
ಕೃತ್ವಾಮಯೀಹ ವಿಲಸನ್ತಮುದಾರಕೀರ್ತಿಮ್ ।
ಪ್ರಾಪ್ಯಾಹಮಸ್ಮಿ ಗರುಡಧ್ವಜಮಪ್ರಮೇಯಂ
ಲೋಕಪ್ರಮಾತೃಚರಣಂ ಶರಣಂ ಕೃತಾರ್ಥಃ ॥

ತಾ॥ ಇವನು ನನಗೆ ದಾಸಭೂತನೆಂದು ನನ್ನಲ್ಲಿ ಪೂರ್ಣಕೃಪೆಯನ್ನು ಮಾಡುವ ಸರ್ವೇಶ್ವರನಾಗಿಯೂ, ಗರುಡಧ್ವಜನಾಗಿಯೂ, ತ್ರಿವಿಕ್ರಮನಾಗಿ ಲೋಕವನ್ನೆಲ್ಲಾ ಪಾದಗಳಿಂದ ಅಳೆದುಕೊಂಡವನಾಗಿಯೂ ಇರುವ ಸ್ವಾಮಿಯನ್ನು ಆಶ್ರಯಿಸಿ ನಾನು ಉಜ್ಜೀವಿಸಿದ ಪ್ರಕಾರವು ಅತ್ಯದ್ಭುತವಾದುದು !

(೧೧) ಆಱಾಮದಯಾನೈ ಯಡರ್ತ್ತವನ್ ತನ್ನೈ,
ಶೇಱಾರ್ ವಯಲ್ ತೆನ್ಕುರುಕೂರ್ ಚ್ಚಡಕೋಪನ್
ನೂಱೇ ಶೊನ್ನ ವೋರಾಯಿರತ್ತುಳಿಪ್ಪತ್ತುಮ್,
ಏಱೇತರುಮ್ ವಾನವರ್ ತಮಿನ್ನುಯಿರ್ಕ್ಕೇ.

ಪ್ರ॥ ಅತ್ತಾ-ಕಮ್ಮಿಯಾಗದ, ಮದ-ಮದವುಳ್ಳ, ಯಾನ್ನೈ-ಕುವಲಯಾಪೀಡ ವೆಂಬ ಆನೆಯನ್ನು, ಅಡರ್ತ್ತವ್ವ ತನ್ನೈ-ಧ್ವಂಸಮಾಡಿದ ಕೃಷ್ಣನನ್ನು ಕುರಿತು, ಕೇಒು ಆರ್ ವಯಲ್-ಕೆಸರಿನಿಂದ ಕೂಡಿದ ಸಸ್ಯಕ್ಷೇತ್ರಗಳುಳ್ಳ, ತೇ-ರಮ್ಯವಾದ (ದಕ್ಷಿಣದಿಕ್ಕಿನ), ಕುರುಕೂರ್ – ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ಶ್ರೀ ಶಠಾರಿಮುನಿಯು, ನೂತ್ರ-ಶತಕದಮೇಲೆ ಶತಕವಾಗಿ, ಶೊನ್ನ – ರಚಿಸಿದ, ಓರಾಯಿರತ್ತುಳ್-ಒಂದುಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವು, ವಾನವರ್‌ತಮ್-ನಿತ್ಯಸೂರಿಗಳ, ಇಉ ಉಯಿರ್ಕ್ಕೇ-ಭೋಗ್ಯವಾದ ಹೃದಯಕ್ಕೆ, ಏಪ್ಟೆ-ಪ್ರೀತ್ಯತಿಶಯವನ್ನು, ತರುಮ್-ಉಂಟುಮಾಡುವುದು.

( ಸ-ಗಾ-ರ )—

ಮತ್ತದ್ವಿಪಪ್ರಮಥನಂ ಕುರುಕಾಪುರೀಶ-
ಸ್ತ್ಸೋತುಂ ಕಿಲಾಹ ಶತಕೈಸ್ತು ಶಠಾರಿರೇತಾಮ್ ।
ಸಾಹಸ್ರಪದ್ಯಸರಣಿಂ! ದಶಕಂ ಕಿಲೇದಂ
ಸಮ್ಪಾದಯೇಚ್ಚ ಪರಮಾಂ ದಿವಿ ಸೂರಿಭೋಗಾಂ ॥

ತಾ॥ ಮತ್ತಗಜನಾಶಕನಾದ ಶ್ರೀಕೃಷ್ಣನನ್ನು ಕುರಿತು ಶ್ರೀ ಕುರುಕಾಪುರಿಯ ಶಠಾರಿಮುನಿಯು ಶತಕಗಳಾಗಿ ರಚಿಸಿ ಇರುವ ಸಹಸ್ರಪದ್ಯಮಾಲೆಯೊಳು ಈ ದಶಕವು ನಿತ್ಯಸೂರಿಗಳಿಗೆ ಭೋಗ್ಯವಾಗಿ ಪ್ರೀತ್ಯತಿಶಯವನ್ನು ಉಂಟುಮಾಡುವುದು.

( ದ್ರ-ಉ-ಸಂ ॥ )—

ಶೀಲಾಧಿಕಶ್ಶ್ರಿಯಮುರಸ್ಸ್ಥಲತೋ ದಧಾನೋ-
ಽಪ್ಯಾತ್ಮೇಪ್ಸಿತಂ ನ ದಿಶತೀತ್ಯತಿಮಾತ್ರಖಿನ್ನಃ ।
ಲಬ್ಧ್ವಾ ತತಃ ಕಮಪಿ ತಸ್ಯ ಕೃಪಾಕಟಾಕ್ಷ-
ಮದ್ರಾಕ್ಷ್ವಿನಾಶಮಿತಿ ಸ ಪ್ರಜಹರ್ಷ ತುರ್ಯೇ ॥

( ದ್ರ-ಉ-ತಾ-ರ ॥ )—

ಲಕ್ಷ್ಮೀವಕ್ಷಸ್ತ್ವಭಾವಾತ್ ಸ್ವಜನಸುಲಭತಾಪರ್ವತೋದ್ಧಾರಣಾದ್ಯೈ-
ರ್ದುರ್ಜ್ಞೇಯತ್ವಾತ್ಸುರಾದೇರಖಿಲಪತಿತಯಾ ನಾಕಿನಾಂ ವೃದ್ಧಭಾವಾತ್ ।
ಸ್ವೇಷಾಂ ಹೃದ್ವಾಸಿತಾಯಾಃ ಸ್ವಜನವಶತಯಾ ತತ್ರ ಚಾಸಕ್ತಿಭೂಮ್ನಾ
ಸ್ವಸ್ವಾಮಿತ್ವಾದಿಬನ್ಧಾಜ್ಜಗದವತಿ ಹರಿಶ್ಶ್ಲೋತ್ಯಭಾಣೀಚ್ಛಠಾರಿಃ ॥

(ಈ ಚತುರ್ಥದಶಕದ ಸಾರಾಂಶ—)

ಈ ನಾಲ್ಕನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವತ್ಸಾಕ್ಷಾತ್ಕಾರವನ್ನು ಅಪೇಕ್ಷಿಸಿ, ಅವನ ಶಙ್ಖ ಚಕ್ರ ಧಾರಿತ್ವವನ್ನೂ, ಬ್ರಹ್ಮಾದಿಗಳಿಗೂ ಸನಕಾದಿಗಳಿಗೂ ಅವನು ಅದೃಶ್ಯನಾಗಿರೋಣವನ್ನೂ, ಅವನ ಗೋವರ್ಧನೋದ್ಧಾರಕತ್ವವನ್ನೂ, ನರಸಿಂಹರೂಪಿತ್ವವನ್ನೂ, ಚತುರ್ಮುಖ ಸೃಷ್ಟಿಕರ್ತೃತ್ವವನ್ನೂ, ಪರಮಪದನಾಥತ್ವವನ್ನೂ, ಹಿರಣ್ಯಾಸುರ ವಕ್ಷೋವಿದಾರಕತ್ವವನ್ನೂ, ದುರ್ಮತಧ್ವಂಸಕತ್ವವನ್ನೂ ಅನುಸನ್ಧಾನಮಾಡಿ, ಅವನ ವಿಷಯದಲ್ಲಿ ಭಕ್ತ್ಯಾಮೃತರೂಪವಾದ ಸೂಕ್ತಿಮಾಲೆಯ ರಚನವನ್ನು ತಾವು ಮಾಡಿದುದಕ್ಕಾಗಿ ಕೃತಾರ್ಥತೆಯನ್ನು ಸೂಚಿಸಿ, ತ್ರಿವಿಕ್ರಮಾವತಾರದ ಸ್ವಾಮಿಯನ್ನು ಆಶ್ರಯಿಸಿ ತಾವು ಉಜ್ಜೀವಿಸಿದ ಪ್ರಕಾರವನ್ನೂ ವರ್ಣಿಸಿ ಇರುತ್ತಾರೆ.

—:✥:—

ಶ್ರೀಃ

# ನವಮಶತಕದಲ್ಲಿ—ಪಞ್ಚಮದಶಕ.

## (ಇನ್ನುಯಿರ್ಚ್ಚೇವಲುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂಪಡೆದು ಈ ನಾಯಕಿಯು ಪಕ್ಷಿಗಣಗಳನ್ನು ಸಮ್ಬೋಧಿಸಿ ತನ್ನ ವಿರಹವೇದನೆಯನ್ನು ಹೇಳುವಂತೆ ವರ್ಣಿಸಿ ಇರುತ್ತಾರೆ.)

---

(೧) ಇನ್ನುಯಿರ್ಚ್ಚೇವಲುಮ್ ನೀರುಮ್
ಕೂವಿಕ್ಕೊಣ್ಡಿಙ್ಗೆತ್ತನೈ,
ಎನ್ನುಯಿರ್ನೋವಮಿೞಱ್ಱೇನ್ಮಿನ್ ಕುಯಿಲ್ ಪೇಡೈಕಾಳ್
ಎನ್ನುಯಿರ್ಕ್ಕಣ್ಣಪಿರಾನೈ ನೀರ್ ವರಕ್ಕೂವುಕಿಲೀರ್,
ಎನ್ನುಯಿರ್ ಕೂವಿಕ್ಕೊಡುಪ್ಪಾರ್ಕ್ಕುಮಿತ್ತನೈ
ವೇಣ್ಡುಮೋ.

ಪ್ರ|| ಕುಯಿಲ್ ಪೇಡೈಕಾಳ್—ಹೆಣ್ಣುಕೋಕಿಲ ಪಕ್ಷಿಗಳೇ !, ಇನ್ ಉಯಿರ್—ನಿಮ್ಮ ಪ್ರಿಯಪ್ರಾಣಭೂತರಾದ, ಶೇವಲುಮ್—ನಾಯಕ ಪಕ್ಷಿಗಳೂ, ಇನ್ ಉಯಿರ್

ನೀರುಮ್-ಅವುಗಳಿಗೆ ಪ್ರಿಯಪ್ರಾಣಭೂತರಾದ (ಸ್ತ್ರೀಪಕ್ಷಿಗಳಾದ) ನೀವುಗಳೂ, ಕೂವಿಕ್ಕೊಣ್ಡು-ಪರಸ್ಪರ ಕೂಗಿಕರೆದುಕೊಂಡು, ಇಙ್ಗು-ಇಲ್ಲಿ (ನನ್ನ ಸಮೀಪದಲ್ಲಿ), ಎತ್ತನೈ - ಎಷ್ಟೋ, ಎನ್ ಉಯಿರ್‌ನೋವ - ನನ್ನ ಪ್ರಾಣಬಾಧೆಯಾಗುವಂತೆ, ಮಿೞಱ್ಱೇನ್ಮಿನ್ - ಸಂಕ್ಲೇಶ ಶಬ್ದಗಳನ್ನು ಮಾಡಬೇಡಿರಿ. ಎನ್ ಉಯಿರ್-ನನಗೆ ಪ್ರಾಣಧಾರಕನಾದ, ಕಣ್ಣಪಿರಾನೈ - ಕೃಷ್ಣಸ್ವಾಮಿಯನ್ನು, ನೀರ್ - ನೀವು, ವರಕ್ಕೂವುಕಿಲೀರ್-ಬರುವಹಾಗೆ ಕರೆಯುವುದಿಲ್ಲ. ಎನ್ ಉಯಿರ್-ನನ್ನ ಪ್ರಾಣವನ್ನು, ಕೂವಿ-ಕರೆದು ಅಪಹರಿಸಿ, ಕೊಡುಪ್ಪಾರ್‌ಕ್ಕುಮ್ - ಅವನಿಗೆ ಕೊಡುವವರಿಗೂ (ಅನ್ಯಾಹ ನಿಮಗೂ), ಇತ್ತನೈವೇಣ್ಡುಮೋ-ಇಷ್ಟು ಕಾರ್ಯವು ಬೇಕೋ?

( ಸ-ಗಾ-ರ )—

ಹೇ!ಹೇ! ಕೋಕಿಲನಾಯಿಕಾಃ! ಪ್ರಿಯತಮೈಃ ಕಾನ್ತೈಸ್ಸಮೇತಾ ಮಿಥ-
ಸ್ಸಾಹೂಯಾತ್ರ ಪುರಶ್ಚ ಮೇ ನ ಕುರುತ ಪ್ರೇಮ್ಣಾ ಚ ಭೋಗಾರವಾನ್ ।
ತನ್ಮೇ ಪ್ರಾಣವಿನಾಶಕಂ ಕಿಲ! ನ ಮೇ ನಾಥನ್ತು ಕೃಷ್ಣಂ ಹರಿಂ
ಯೂಯಂ ಚಾಹ್ವಯಥಾದ್ಯ! ಕಿಂ ಹರಥ ವಾ ತಸ್ಮೈ ಮದಾಸೂನಿಮಾನ್॥

ತಾ॥ ಹೆಣ್ಣುಕೋಕಿಲಪಕ್ಷಿಗಳೇ! ನಿಮ್ಮ ನಾಯಕಪಕ್ಷಿಗಳೂ ನೀವೂ ಪರಸ್ಪರ ಕೂಗಿ ನನ್ನ ಪ್ರಾಣಬಾಧೆಯುಂಟಾಗುವಂತೆ ಸಂಕ್ಲೇಶ ಶಬ್ದವನ್ನು ಮಾಡಬೇಡಿರಿ. ನನಗೆ ಪ್ರಾಣಧಾರಕನಾದ ಕೃಷ್ಣಸ್ವಾಮಿಯನ್ನು ನೀವು ನನ್ನ ಸಮೀಪಕ್ಕೆ ಬರುವಂತೆ ಕರೆಯುವುದಿಲ್ಲ. ನನ್ನ ಪ್ರಾಣಾಪಹಾರಿಗಳಾದ ನಿಮಗೂ ಇಷ್ಟು ಆಡಂಬರವು ಬೇಕೋ?

(೨) ಇತ್ತನೈ ವೇಣ್ಡುವದನ್ಱನ್ದೋ ಅನ್ಱಿಲ್‌ಪೇಡೈಕಾಳ್,
ಎತ್ತನೈ ನೀರುಮ್ ನುಮ್ ಶೇವಲುಮ್ ಕರೈನ್ದೇಙ್ಗಿದಿರ್,
ವಿತ್ತಕನ್ ಗೋವಿನ್ದನ್ ಮೆಯ್ಯನಲ್ಲನೊರುವರ್‌ಕ್ಕುಮ್,
ಅತ್ತನೈಯಾಮಿನಿ ಯೆನ್ನುಯಿರವನ್ ಕೈಯದೇ.

ಪ್ರ॥ ಅನ್ಱಿಲ್‌ಪೇಡೈಕಾಳ್-ಹೆಣ್ಣು ಅನ್ಱಿಲ್ ಪಕ್ಷಿಗಳಿರಾ!, ನೀರುಮ್-ನೀವುಗಳೂ, ನುಮ್ ಶೇವಲುಮ್ - (ನಿಮ್ಮ ಮನೋಭಾವಗಳನ್ನು ತಿಳಿದ) ನಿಮ್ಮ ನಾಯಕಪಕ್ಷಿಗಳೂ ಸೇರಿಕೊಂಡು, ಎತ್ತನೈ-ಎಷ್ಟುವಿಧವಾಗಿ, ಕರೈನ್ದು-ಸಂಕ್ಲೇಶರಸದಿಂದ ದ್ರವೀಭೂತರಾಗಿ, ಏಙ್ಗಿದಿರ್-ಶಬ್ದಮಾಡುತ್ತಿದ್ದೀರಿ. ಇತ್ತನೈ-ಇಷು ಆಡಮ್ಬರವು (ಅತಿ ವ್ಯಾಪಾರವು), ವೇಣ್ಡುವದನ್ಱು-ಬೇಕಾದುದಿಲ್ಲ. ಅನ್ದೋ-

ಅಯ್ಯೋ!, ವಿತ್ತಕರ್-ಆಶ್ಚರ್ಯಚೇಷ್ಟಿತಗಳುಳ್ಳ, ಗೋವಿನ್ದರ್-ಗೋಪಾಲಕನಾದ ಕೃಷ್ಣನು, ಒರುವರ್ಕ್ಕುಮ್-ಯಾರಿಗೂ, ಮೆಯ್ಯರಲ್ಲರ್-ಸತ್ಯಶೀಲನಲ್ಲ. ಇನಿ-ಹೀಗಾದಮೇಲೆ, ಎನ್ ಉಯಿರ್ - ನನ್ನ ಪ್ರಾಣವು, ಅವರ್ ಕೈಯದೇ - ಅವನ ಹಸ್ತಗತವಾದುದೇ, ಆಮತ್ತನೈ-ಆಗುವುದಷ್ಟೆ !.

( ಸ-ಗಾ-ರ )—

ಕಾನ್ತಾಪಕ್ಷಿಗಣಾಃ! ಪ್ರಿಯೈಸ್ಸಹ ಕಥಂ ಸಂಶ್ಲೇಷಶಬ್ದಾನಿಮಾ-
ನೇವಂ ಹನ್ತ! ಚಿರಂ ಕುರುಧ್ವ ಇಹ ವಾ? ಹಾ ಹನ್ತ! ನೈತದ್ವರಮ್ |
ಮಾಯಾಚೇಷ್ಟಿತವೈಭವಸ್ಸ ತು ಹರಿರ್ನೈವಾಸ್ತಿ ಸತ್ಯವ್ರತೋ
ಗೋವಿನ್ದಸ್ತತ ಏವ ಹಸ್ತಕಲಿತಂ ತಸ್ಯಾಸ್ತಿ ಮೇ ಜೀವಿತಮ್ ||

ತಾ|| ಹೆಣ್ಣು ಅನ್ಱಿಲ್ ಪಕ್ಷಿಗಳಿರಾ! ನೀವು ನಿಮ್ಮ ನಾಯಕಪಕ್ಷಿಗಳೊಡನೆ ಸೇರಿ ಸಂಶ್ಲೇಷರಸದಿಂದ ಎಷ್ಟುವಿಧವಾಗಿ ಶಬ್ದಮಾಡುತ್ತೀರಿ ! ಇಷ್ಟು ಆಡಂಬರವನ್ನು ಮಾಡಬೇಡಿರಿ. ಅಯ್ಯೋ! ಆಶ್ಚರ್ಯಚೇಷ್ಟಿತನಾದ ಗೋವಿನ್ದನು ಯಾರಿಗೂ ಸತ್ಯಶೀಲನಲ್ಲ. ಹೀಗಾದಮೇಲೆ ನನ್ನ ಪ್ರಾಣವು ಅವನ ಹಸ್ತಗತವಾದುದೇ ಆಗುವುದಷ್ಟೆ !

(೩) ಅವನ್ ಕೈಯದೇ ಯೆನದಾರುಯಿರ್ ಅನ್ಱಿಲ್ ಪೇಡೈಕಾಳ್,
ಎವಮ್ ಶೊಲ್ಲಿ ನೀರ್ ಕೂಡ್ಡಿನ್ಱಾಡುದಿರ್ ಪುಡೈಶೂೞ್ವೇ,
ತವಮ್ ಶೆಯ್ದಿಲ್ಲಾ ವಿನೈಯಾಟ್ಟಿಯೇನುಯಿರಿಙ್ಗುಣ್ಡೋ
ಎವಮ್ ಶೊಲ್ಲಿ ನಿಱ್ಱುಮಿರ್ ನುಮ್ಮೇಙ್ಗು ಕೂಕ್ಕುರಲ್
ಕೇಟ್ಟುಮೇ.

ಪ್ರ|| ಅನ್ಱಿಲ್ ಪೇಡೈಕಾಳ್-ಅನ್ಱಿಲ್ ಸ್ತ್ರೀಪಕ್ಷಿಗಳೇ!, ಎನದು ಆರ್ ಉಯಿರ್, ನನ್ನ ದುರ್ಲಭವಾದ ಪ್ರಾಣವು, ಅವರ್ ಕೈಯದೇ - ಅವನ ಹಸ್ತಗತವಾದುದೇ. ನೀರ್-ನೀವು, ಎವಮ್ ಶೊಲ್ಲಿ-ಎಷ್ಟು ರಸೋಕ್ತಿಗಳನ್ನು ಹೇಳಿ, ಕೂಡ್ಡಿನ್ಱು-ಒಬ್ಬರಿಗೊಬ್ಬರು ಏಕೀಭವಿಸಿ ಸಂಶ್ಲೇಷಿಸಿ, ಪುಡೈಶೂೞ್ವೇ - ಸಮಾಪಿಸಿ ಸುತ್ತಿ ಸುತ್ತಿ, ಆಡುದಿರ್- ಆಡುತ್ತೀರಿ. ತವಮ್ ಶೆಯ್ದು ಇಲ್ಲಾ-ಅವನಹಾಗೆ ತಪಃ ಪುಣ್ಯವನ್ನು ಮಾಡದೆ ಇರುವ (ಭಾಗ್ಯಶಾಲಿನಿಯಲ್ಲದ), ವಿನೈಯಾಟ್ಟಿಯೇನ್ - ಪಾಪಿಷ್ಠೆಯಾದ ನನ್ನ, ಉಯಿರ್-ಪ್ರಾಣವು, ಇಙ್ಗು ಉಣ್ಡೋ-ಇಲ್ಲಿ ಉಂಟೋ? (ಅವನಲ್ಲೇ

ಹೋಗಿ ಸೇರಿಬಿಟ್ಟಿದೆಯಷ್ಟೆ!) ನುಮ್-ನಿಮ್ಮ, ಏಙ್ಗುಕೂಕ್ಕುರಲ್-ಆರ್ತಸ್ವರಗಳನ್ನು, ಕೇಟ್ಟುಮೇ-ಕೇಳಿಯೂ, ಎವಮ್‌ಶೊಲ್ಲಿ-ಏನನ್ನು ಹೇಳಿ, ನಿನ್ಱುಮ್-ನಾನು ಪ್ರಾಣವನ್ನು ಧರಿಸುವೆನು ?

( ಸ-ಗಾ-ರ ‖ )—

ಭೋ! ಭೋ! ಸ್ತ್ರೀಶಕುನಾಃ ಪ್ರಿಯಾ ಅಪಿ ಮಮ ಪ್ರಾಣಾಃ ಪ್ರತಿಷ್ಠಾಪಿತಾ-
ಸ್ತಸ್ಯೈವಾದ್ಯ ಕರೇ ಹರೇರಿಹ ರತಾ ಯೂಯಂ ಮಹಾಸಮ್ಭ್ರಮೈಃ ।
ಸಂಶ್ಲೇಷ್ಯೈಕರಸಾಃ! ಕಥಂ ಬತ ಸಹೇ ದುರ್ಭಾಗ್ಯತಃ ಪಾಪಿನೀ ?
ನೈವಾತ್ರಾದ್ಯ ಮಮಾಸವಃ ಕಿಲ! ಕಥಂ ಮೇ ಜೀವಿತಂ ಧಾರಯೇ ? ‖

ತಾ॥ ಅನ್ಱಿಲ್ ಸ್ತ್ರೀಪಕ್ಷಿಗಳೇ! ನನ್ನ ಪ್ರಾಣವು ಅವನ ಹಸ್ತಗತವಾದುದೇ! ನೀವು ಪರಸ್ಪರ ರಸೋಕ್ತಿಗಳೊಡನೆ ಸಂಶ್ಲೇಷಿಸಿ ಸುತ್ತಿ ಸುತ್ತಿ ಆಡುತ್ತೀರಿ ಭಾಗ್ಯಶಾಲಿನಿಯಲ್ಲದ ಪಾಪಿಷ್ಠೆಯಾದ ನನ್ನ ಪ್ರಾಣವು ಇಲ್ಲಿ ಇಲ್ಲವಷ್ಟೆ! (ಅವನಲ್ಲೇ ಸೇರಿಬಿಟ್ಟಿದೆಯಷ್ಟೆ!) ನಿಮ್ಮ ಆರ್ತಸ್ವರಗಳನ್ನು ಕೇಳಿಯೂ ನಾನು ಪ್ರಾಣವನ್ನು ಹೇಗೆ ಧರಿಸುವೆನು ?

(೪) ಕೂಕ್ಕುರಲ್‌ಕೇಟ್ಟುಮ್ ನಮ್ ಕಣ್ಣನ್ ಮಾಯನ್
ವೆಳಿಪ್ಪಡಾನ್,
ಮೇಲ್ಕಿಳೈಕೊಳ್ಳೇನ್ಮಿನ್ ನೀರುಮ್ ಶೇವಲುಮ್
ಕೋೞಿಕಾಳ್,
ವಾಕ್ಕುಮ್ ಮನಮುಮ್ ಕರುಮಮುಮ್ ನಮಕ್ಕಾಙ್ಗದೇ,
ಆಕ್ಕೈಯುಮಾವಿಯುಮ್ ಅನ್ದರಮ್ ನಿನ್ಱುೞಲುಮೇ.

ಪ್ರ॥ ಕೋೞಿಕಾಳ್-ಕೋಳಿಗಳೇ!, ಕೂಕ್ಕುರಲ್-ನೀವು ಒಬ್ಬರನ್ನೊಬ್ಬರು ಕರೆಯುವ ಧ್ವನಿಯನ್ನು, ಕೇಟ್ಟುಮ್-ಕೇಳಿಯೂ, ನಮ್-ನಮ್ಮ, ಮಾಯನ್-ಆಶ್ಚರ್ಯಚೇಷ್ಟಿತನಾದ, ಕಣ್ಣನ್-ಕೃಷ್ಣನು, ವೆಳಿಪ್ಪಡಾನ್-ಬರುವುದಿಲ್ಲ. ನುಮ್ ಶೇವಲುಮ್-ನಿಮ್ಮ ನಾಯಿಕಪಕ್ಷಿಗಳೂ, ನೀರುಮ್-ನೀವೂ, ಮೇಲ್-ಮೇಲೆ ಎದ್ದು, ಕಿಳೈಕೊಳ್ಳೇನ್ಮಿನ್-ಸೇರಿ ಕೂಗಬೇಡಿರಿ. ನಮಕ್ಕು-ನಮಗೆ, ವಾಕ್ಕುಮ್-ವಾಕ್ಕೂ, ಮನಮುಮ್-ಮನಸ್ಸೂ, ಕರುಮಮುಮ್-ಕಾರ್ಯವೂ, ಆಙ್ಗದೇ-ಅವನ

ವಿಷಯವಾದುದೇ. ಆಕ್ಕೈಯುಮ್ – ಶರೀರವೂ, ಆವಿಯುಮ್ – ಪ್ರಾಣವೂ, ಅನ್ದರಮ್ ನಿನ್ರು-ನಡುವೇ ನಿಂತು, ಉೞಲುಮೇ-ಅಲ್ಲಾಡುತ್ತಿವೆ.

( ಸ-ಗಾ-ರ ॥ )—

ಯೂಯಂ ಕುಕ್ಕುಟನಾಯಿಕಾಃ! ಪ್ರಿಯತಮೈಸ್ಸಂಶ್ಲೇಷಶಬ್ದಾನ್ವಿತಾಃ
ಕೃಷ್ಣೋ ಹನ್ತ! ನಿಶಮ್ಯ ಚಾಪಿ ನ ಹಿ ಮಾಮಾಯಾತಿ ಮಾಯೀ ಹರಿಃ ।
ಏವಂ ಮಾಕುರುತಾದ್ಯ ಶಬ್ದಮಧುನಾ! ವಾಕ್ಚಿತ್ತಕರ್ಮಾಣಿ ನಃ
ತಸ್ಮಿನ್ನೇವಾದ್ಯ ವಶೇ! ಶರೀರಮಸವಶ್ಚೋಭೌ ಚರನ್ತ್ಯನ್ತರೇ ॥

ತಾ॥ ಹೆಣ್ಣುಕೋಳಿಗಳೇ! ನೀವು ನಿಮ್ಮ ನಾಯಕಪಕ್ಷಿಗಳೊಡನೆ ಸಂಶ್ಲೇಷಕ್ಕಾಗಿ ಪರಸ್ಪರ ಕೂಗುತ್ತಿದ್ದಾಗ್ಯೂ ನಮ್ಮ ಮಾಯಾಚೇಷ್ಟಿತನಾದ ಕೃಷ್ಣನು ಬರುವುದಿಲ್ಲ. ನೀವು ಹೀಗೆ ಶಬ್ದಮಾಡಬೇಡಿರಿ. ನಮ್ಮ ಮನೋವಾಕ್ಕಾಯಗಳೆಲ್ಲಾ ಅವನಲ್ಲಿಯೇ ಸಕ್ತವಾಗಿವೆ. ಶರೀರವೂ ಪ್ರಾಣವೂ ನಡುವೆ ನಿಂತು ಅಲ್ಲಾಡುತ್ತಿವೆ.

(೫) ಅನ್ದರಮ್ ನಿನ್ರುೞಲ್‌ಕಿನ್ರ ಯಾನುಡೈ ಪ್ಪೂವೈಕಾಳ್,
ನುಮ್ ತಿಱತ್ತೇದುಮಿಡೈಯಿಲ್ಲೈ ಕುೞಱೇನ್ಮಿನೋ,
ಇನ್ದಿರಞಾಲಙ್ಗಳ್‌ಕಾಟ್ಟಿ ಯಿವ್ವೇೞುಲಕುಮ್ ಕೊಣ್ಡ,
ನಮ್‌ತಿರುಮಾರ್ವರ್ ನಮ್ಮಾವಿಯುಣ್ಣ ನನ್ಗೆಣ್ಣಿನಾರ್

ಪ್ರ॥ ಅನ್ದರಮ್ ನಿನ್ರು-ನಡುವೇ ನಿಂತು, ಉೞಲ್‌ಕಿನ್ರ-ಸಂಚರಿಸುತ್ತಿರುವ, ಯಾನುಡೈ-ನನ್ನ, ಪೂವೈಕಾಳ್-ಪೂವೈಪಕ್ಷಿಗಳೇ!, ನುಮ್ ತಿಱತ್ತು – ನಿಮ್ಮ ಸಮೀಪದಲ್ಲಿ, ಏದುಮ್ ಇಡೈಯಿಲ್ಲೈ-(ನನ್ನನ್ನು ಕ್ಲೇಶಪಡಿಸಲು) ಯಾವುದಕ್ಕೂ ಅವಕಾಶವಿಲ್ಲ. ಕುೞರೇನ್ಮಿನೋ-ಸುಮ್ಮನೆ ಮನಸ್ಸು ಬಂದಂತೆ ಕೂಗಬೇಡಿರಿ. ಇನ್ದಿರ್ಞಾಲಙ್ಗಳ್‌ಕಾಟ್ಟಿ-ಇನ್ದ್ರಜಾಲಗಳಂತೆ ಭ್ರಮಿಸುವಹಾಗೆ ತನ್ನ ಗುಣವಿಗ್ರಹಚೇಷ್ಟಿತಗಳನ್ನು ತೋರಿಸಿ, ಇವ್ವುಲಕುಮ್-ಈ ಸಪ್ತಲೋಕಗಳನ್ನೂ, ಕೊಣ್ಡ-ವಶೀಕರಿಸಿದ, ನಮ್-ನಮ್ಮ, ತಿರುಮಾರ್ವರ್ – ಲಕ್ಷ್ಮಿಯನ್ನು ವಕ್ಷಸ್ಸ್ಥಲದಲ್ಲಿ ಉಳ್ಳ ಸ್ವಾಮಿಯು, ನಮ್ ಆವಿ-ನಮ್ಮ ಪ್ರಾಣವನ್ನು, ಉಣ್ಣ-ಭಕ್ಷಿಸಲು, ನನ್ಗು ಎಣ್ಣಿನಾರ್-ಎಷ್ಟು ಚೆನ್ನಾಗಿ ಆಲೋಚಿಸಿದನೋ !!!

( ಸ–ಗಾ–ರ )—

ಯೂಯಂ ಪಕ್ಷಿಗಣಾಃ! ಕಥಂ ಮಮ ಪುರೋ ಹಾ! ಹನ್ತ! ನಾನಾರವೈ-
ರ್ನೃತ್ಯನ್ತೋಽದ್ಯ ತುದೇತ ಮಾಂ? ಸ ಹಿ ಹರಿರ್ವರ್ಣೈರಿವೇನ್ದ್ರಜಾಲಾಕುಲೈ'
ರ್ಜಿತ್ವಾ ಸಪ್ತ ಜಗನ್ತಿ ಭಾತಿ ಚ ವರೋ ಲಕ್ಷ್ಮೀಂ ಚ ವಕ್ಷಃಸ್ಥಲೇ!
ಭೋಕ್ತುಂ ಮೇ ಸಕಲಾನಸೂನ್ ಕೃತಮತಿರ್ಹಾ! ಹನ್ತ! ಸರ್ವ್ವಾಃ
ಸ್ವಯಮ್ ||

ತಾ|| ಅಲ್ಲಲ್ಲಿ ಸಂಚರಿಸುತ್ತಿರುವ ಪೂರ್ವಪಕ್ಷಿಗಳೇ! ನನ್ನನ್ನು ಕ್ಲೇಶಪಡಿಸಲು ನಿಮಗೆ ಯಾವ ಅವಕಾಶವೂ ಇಲ್ಲ. ಮನಸ್ಸು ಬಂದಂತೆ ಕೂಗಬೇಡಿರಿ. ಇನ್ದ್ರಜಾಲವಿದ್ಯೆಗಳನ್ನೆಲ್ಲಾ ತೋರಿಸಿ ಸಪ್ತಲೋಕಗಳನ್ನೂ ವಶೀಕರಿಸಿದ ಲಕ್ಷ್ಮೀಧರನಾದ ಸ್ವಾಮಿಯು ಚೆನ್ನಾಗಿ ನನ್ನ ಪ್ರಾಣವನ್ನು ಭಕ್ಷಿಸಲು ಹೇಗೆ ಆಲೋಚಿಸಿದನೋ !

(೬) ನನ್ನೆಣ್ಣಿ ನಾನ್ವಳರ್ತ್ತ ಶಿಱುಕಿಳಿಪ್ಪೈದಲೇ,
ಇನ್ಕುರಲ್ ನೀಮಿಱಱ್ಱೇಲೆನ್ನಾರುಯಿರ್ ಕಾಕುತ್ತನ್,
ನಿನ್ಶೆಯ್ಯ ವಾಯೊಕ್ಕುಮ್ ವಾಯನ್ ಕಣ್ಣನ್ ಕೈಕಾಲಿನನ್,
ನಿನ್ಪಶುಮ್ಶಾಮನಿಱತ್ತನ್ ಕೂಟ್ಟುಣ್ಣಾ ನೀಙ್ಗಿನಾನ್.

ಪ್ರ|| ಎನ್ ಆರುಯಿರ್ – ನನ್ನ ಪೂರ್ಣಪ್ರಾಣಭೂತನಾದ, ಕಾಕುತ್ತನ್–ಕಾಕುತ್ಸ್ಥನಾದ ಶ್ರೀರಾಮನು, ನಿನ್ – ನಿನ್ನ, ಶೆಯ್ಯ – ಕೆಂಪಾದ, ವಾಯ್ ಒಕ್ಕುಮ್–ಬಾಯಿಗೆ ಸಮಾನವಾದ, ವಾಯನ್–ಬಾಯಿ ಉಳ್ಳ, ಕಣ್ಣನ್–(ಕಮಲಗಳಂತೆ ಕೆಂಪಾದ) ಅನ್ತಹ ಕಣ್ಣುಗಳುಳ್ಳವನೂ, ಕೈಕಾಲಿನನ್–ಅನ್ತಹ ಕೈಕಾಲುಗಳು ಉಳ್ಳವನೂ, ನಿನ್–ನಿನ್ನ, ಪಶುಮ್ ಶಾಮ ನಿಱತ್ತನ್–ಹಚ್ಚಗೆ ಇರುವ ಶ್ಯಾಮಳವರ್ಣವುಳ್ಳವನು, ಕೂಟ್ಟುಣ್ಣಾ–ನನ್ನೊಡನೆ ಕೂಡಿ ಇದ್ದು, ನೀಙ್ಗಿನಾನ್–ಬಿಟ್ಟುಹೋದನು. ನನ್ನು ಎಣ್ಣಿ – ನೀನು ನನಗೆ ಅನುಕೂಲವಾಗಿರುವಿಯೆಂದು ಆಲೋಚಿಸಿ, ನಾನ್ ವಳರ್ತ್ತ–ನಾನು ಬೆಳೆಸಿದ, ಶಿಱು–ಚಿಕ್ಕ, ಕಿಳಿಪ್ಪೈದಲೇ–ಗಿಣಿಯಮರಿಯೇ!, ನೀ–ನೀನು, ಇನ್ ಕುರಲ್–(ನಿನ್ನ) ಮಧುರವಾದ ಗಾನಧ್ವನಿಯನ್ನು ಮಾಡಿ, ಮಿಱಱ್ಱೇಲ್–ಶಬ್ದ ಮಾಡಬೇಡ.

( ಸ–ಗಾ–ರ ॥ )—

ಮತ್ಪ್ರಾಣಾಯಿತ ಏವ ತೇಽಸ್ತಿ ಸದೃಶೋ ವಕ್ತ್ರೇ ಚ ನೇತ್ರೇ ತಥಾ
ಕಾಕುತ್ಸ್ಥಃ ಕರತೋಽಪಿ ಪಾದತಲತಶ್ಶ್ಯಾಮಾತ್ಮನೋರ್ವರ್ಣತಃ |
ಸೋಽಯಂ ಸಙ್ಗತ ಏವ ಮಾಂ ತ್ಯಜತಿ ಹಾ! ತ್ವಂ ಮೇ ಸಖೀತಿ ಧ್ರುವಾ–
ದೇವಂ ಹೇ ಶುಕ! ವರ್ಧಿತೋಽಸಿ ಹಿ ಮಯಾ ಮುಗ್ಧ! ತ್ಯಜಾದ್ಯಾರವಾನ್||

ತಾ|| ನನ್ನ ಪೂರ್ಣಪ್ರಾಣಭೂತನಾದ ಕಾಕುತ್ಸ್ಥನು (ಶ್ರೀರಾಮನು) ನಿನ್ನ ಕೆಂಪಾದ ಬಾಯಿಗೆ ಸಮಾನವಾದ ವಕ್ತ್ರನೇತ್ರ ಹಸ್ತಪಾದಗಳುಳ್ಳವನು. ನಿನ್ನ ಹಾಗೆ ಶ್ಯಾಮಳವರ್ಣನು. ನನ್ನೊಡನೆ ಕೂಡಿ ಇದ್ದು ನನ್ನನ್ನು ಬಿಟ್ಟುಹೋದನು. ನೀನು ನನಗೆ ಅನುಕೂಲವಾಗಿರುವಿಯೆಂದು ಆಲೋಚಿಸಿ ನಾನು ಬೆಳೆಸಿದ ಚಿಕ್ಕ ಗಿಣಿಯುಮರಿಯೇ! ನಿನ್ನ ಮಧುರ ಗಾನಧ್ವನಿಯನ್ನು (ವೃಥಾ) ಶಬ್ದಮಾಡಬೇಡ.

(೨) ಕೂಟ್ಟುಣ್ಡುನೀಙ್ಗಿಯ ಕೋಲತ್ತಾಮರೈಕ್ಕಣ್ಶೆವ್ವಾಯ್,
ವಾಟ್ಟಮಿಲ್ಲೆನ್ ಕರುಮಾಣಿಕ್ಕಮ್ ಕಣ್ಣನ್
ಮಾಯನ್ಪೋಲ್,
ಕೋಟ್ಟಿಯ ವಿಲ್ಲೊಡು ಮಿನ್ನುಮೇಕಕ್ಕುೞಾಙ್ಗಳ್ಕಾಳ್,
ಕಾಟ್ಟೇಲ್ಮಿನ್ ನುಮ್ಮುರು ಎನ್ನುಯಿರ್ಕ್ಕದು ಕಾಲನೇ.

ಪ್ರ|| ಕೂಟ್ಟುಣ್ಡು–ನನ್ನೊಡನೆ ಸೇರಿ, ನೀಙ್ಗಿಯ–ಬಿಟ್ಟುಹೋದ, ಕೋಲತ್ತಾಮರೈಕ್ಕಣ್ – ರಮ್ಯವಾದ ತಾವರೆಹೂವಿನಂತೆ ಕಣ್ಣುಗಳುಳ್ಳ, ಶೆವ್ವಾಯ್–ಬಿಂಬಫಲದಂತೆ ಅಧರವುಳ್ಳ, ವಾಟ್ಟಮಿಲ್–(ಬಾಡದೆ ಇರುವ) ರಮಣೀಯವಾದ, ಎನ್ ಕರುಮಾಣಿಕ್ಕಮ್–ನನ್ನ ನೀಲರತ್ನಸದೃಶನಾದ, ಕಣ್ಣನ್–ಕೃಷ್ಣರೂಪಿಯಾದ, ಮಾಯನ್ಪೋಲ್–ಆಶ್ಚರ್ಯಚೇಷ್ಟಿತನಾದ ಅವನಹಾಗೆ, ಕೋಟ್ಟಿಯ–ಬಗ್ಗಿ ಇರುವ, ವಿಲ್ಲೊಡು–ಧನುಸ್ಸಿನೊಡನೆ, ಮಿನ್ನುಮ್–ಪ್ರಕಾಶಿಸುವ, ಮೇಕಕ್ಕುೞಾಙ್ಗಳ್ಕಾಳ್–ಮೇಘಸಮೂಹಗಳೇ!, ಎನ್ ಉಯಿರ್ಕ್ಕು–ನನ್ನ ಪ್ರಾಣನಿಗೆ, ಅದುಕಾಲನ್–ಅದು ಯಮನಹಾಗೆ ಇರುವುದು. (ಆದುದರಿಂದ) ನುಮ್ ಉರು–ನಿಮ್ಮ ರೂಪವನ್ನು, ಕಾಟ್ಟೇಲ್ಮಿನ್–ತೋರಿಸಬೇಡಿರಿ.

( ಸ-ಗಾ-ರ || )—

ಸಙ್ಗತ್ಯೈವ ಮಯಾ ಸಹಾದ್ಯ ತು ಗತೋ ದೂರಂ ಸರೋಜಾಮ್ಬಕಃ
ಕೃಷ್ಣೋ ನೀಲಮಣಿಪ್ರಭಃ ಪ್ರಿಯತಮೋ ಮಾಯೀ ಚ ಬಿಮ್ಬಾಧರಃ |
ವಿದ್ಯುಚ್ಚಾಪಲಸತ್ಪಯೋದನಿವಹಾ ಯೂಯಂ ಸಮಾನಾ ಹಿ ಮೇ
ಕಾನ್ತಸ್ಯೇತಿ ಮಮಾಸುಹಾರಿ ತದಿದಂ! ಯುಷ್ಮದ್ವಪುರ್ಗೋಪ್ಯತಾಮ್||

ತಾ|| ನನ್ನೊಡನೆ ಸೇರಿ ಬಿಟ್ಟುಹೋದ ಪುಣ್ಡರೀಕಾಕ್ಷನೂ, ಬಿಂಬಾಧರನೂ, ರಮಣೀಯ ಮಾಣಿಕ್ಯವರ್ಣನೂ ಆದ ಮಾಯಾಮಯನಾದ ಕೃಷ್ಣನಿಗೆ ಸದೃಶವಾದ (ವಿದ್ಯುಚ್ಛಾಪದಿಂದ ಪ್ರಕಾಶಿಸುವ) ಮೇಘಸಮೂಹಗಳೇ! ನನ್ನ ಪ್ರಾಣಗಳಿಗೆ ನಿಮ್ಮರೂಪವು ಯಮನಹಾಗೆ ಇರುವುದು. ಆದುದರಿಂದ ಅದನ್ನು ತೋರಿಸಬೇಡಿರಿ.

(೮) ಉಯಿರ್‌ಕ್ಕದು ಕಾಲನೆನ್ಱುಮ್ಮೈ ಯಾನಿರನ್ದೇಱ್ಕು, ನೀರ್
ಕುಯಿಲ್‌ಪೈದಲ್‌ಕಾಳ್ ಕಣ್ಣನ್ ನಾಮಮೇ
ಕುೞಱಿಕೊಣ್ಡೀರ್,
ತಯಿರ್‌ಪ್ಪೞಮ್ ಶೋಱ್ಱೊಡು ಪಾಲಡಿಶಿಲುಮ್
ತನ್ದು, ಶೊಲ್
ಪಯಿಱ್ಱಿಯ ನಲ್‌ವಳಮೂಟ್ಟಿನೀರ್ ಪಣ್ಬುಡೈಯೀರೇ.

ಪ್ರ|| ಯಾನ್-ನಾನು, ಅದು-ಅದು, ಉಯಿರ್‌ಕ್ಕು-ಪ್ರಾಣನಿಗೆ, ಕಾಲನ್ ಎನ್ಱು-ಯಮನೆಂದು, ಉಮ್ಮೈ-ನಿಮ್ಮನ್ನು, ಇರನ್ದೇಱ್ಕು - ಪ್ರಾರ್ಥಿಸಿದ ನನಗೆ, ಕುಯಿಲ್ ಪೈದಲ್‌ಕಾಳ್-ಕೋಕಿಲ ಶಿಶುಗಳೇ!, ನೀರ್-ನೀವು, ಕಣ್ಣನ್-ಕೃಷ್ಣನ, ನಾಮಮೇ - ನಾಮಧೇಯಗಳನ್ನೇ, ಕುೞಱಿ - ಅವ್ಯಕ್ತಮಧುರವಾಗಿ ಹೇಳಿ, ಕೊಣ್ಡೀರ್-ಕೊಂಡುಬಿಟ್ಟಿರಿ ತಯಿರ್-ಮೊಸರು, ಪೞಮ್-ಹಣ್ಣು, ಶೋಱ್ಱೊಡು-ಅನ್ನದೊಡನೆ, ಪಾಲಡಿಶಿಲುಮ್ ತನ್ದು-ಕ್ಷೀರಾನ್ನವನ್ನೂ ತಂದುಕೊಟ್ಟು, ಶೊಲ್-ನಿಮಗೆ ಮಾತುಗಳನ್ನೂ, ಪಯಿಱ್ಱಿಯ - ಕಲಿಸಿದ ಉಪಕಾರಕ್ಕೆ ಪ್ರತಿಯಾಗಿ, ನಲ್‌ವಳಮ್-ಒಳ್ಳೇ ಸಮ್ಪತ್ತನ್ನು, ಊಟ್ಟಿನೀರ್ - ನನಗೆ ನೀವು ಅನುಭವಿಸುವಂತೆ ಮಾಡಿದಿರಿ. ಪಣ್ಬುಡೈಯೀರೇ-ನೀವು ಒಳ್ಳೇ ಶೀಲವುಳ್ಳವರಲ್ಲವೇ!

( ಸ-ಗಾ-ರ ॥ )—

ಯೂಯಂ ಕೋಕಿಲಬಾಲಕಾಃ! ಕಿಮು ಹರೇಃ ಕೃಷ್ಣಸ್ಯ ನಾಮಾನಿ ತಾ-
ನ್ಯೇವಂ ಹನ್ತ! ವಿಘೋಷ್ಯ ಜೀವಿತಹರಾಃ? ಕಿಂ ಪ್ರಾರ್ಥನಂ ಮೇ ವೃಥಾ?।
ಯುಷ್ಮಾಕಂ ದಧಿದುಗ್ಧಮಿಶ್ರಮುಪಮೋವಾನ್ನಂ ಸಮರ್ಪ್ಯಾಖಿಲಾಂ
ಸೂಕ್ತೀನಾಂ ಸರಣಿಂ ಚ ಶಿಕ್ಷಿತವತೀತ್ಯೇವಂ ಕಿಮೇತತ್ಫಲಮ್ ? ॥

ತಾ॥ ಕೋಕಿಲ ಶಿಶುಗಳೇ! "ನನ್ನ ಪ್ರಾಣಕ್ಕಿಗೆ ಅದು ಯಮಸದೃಶವಾಗಿರುವುದು"—ಎಂದು ನಾನು ಪ್ರಾರ್ಥಿಸಿದಾಗ್ಯೂ ನೀವು ಕೃಷ್ಣನ ಮಧುರವಾದ ನಾಮಧೇಯಗಳನ್ನೇ ಹೇಳಿ ನನ್ನ ಪ್ರಾಣವನ್ನು ಕೊಂದುಬಿಟ್ಟಿರಿ. ಮೊಸರು ಹಣ್ಣುಗಳೊಡನೆ ನಿಮಗೆ ಕ್ಷೀರಾನ್ನವನ್ನೂ ತಂದುಕೊಟ್ಟು ನಿಮಗೆ ಮಾತುಗಳನ್ನೂ ಕಲಿಸಿದ ಉಪಕಾರಕ್ಕೆ ಪ್ರತಿಯಾಗಿ ಒಳ್ಳೇ ಸಮ್ಪತ್ತನ್ನು ನನಗೆ ಉಂಟುಮಾಡಿದಿರಿ. ನೀವು ಸುಶೀಲರಲ್ಲವೇ!

(೯) ಪಣ್ಪುಡೈ ವಣ್ಡೋಡು ತುಮ್ಬಿಕಾಳ್ ಪಣ್ಮಿಳಱ್ಱೇಲ್ಮಿ‌ನ್,
ಪುಣ್ಪುರೈ ವೇಲ್‌ಕೊಡುಕುತ್ತಾಲೊಕ್ಕುಮ್ ನುಮ್ಮಿನ್
ಕುರಲ್,
ತಣ್ಪೆರುನೀರ್ ತಡಸ್ತಾಮರೈ ಮಲರ್‌ನ್ದಾಲೊಕ್ಕುಮ್,
ಕಣ್ಪೆರುಙ್ಕಣ್ಣನ್ ನಮ್ಮಾವಿಯುಣ್ಡೆೞ ನ್ದನನ್.

ಪ್ರ॥ ಪಣ್ಪು ಉಡೈ-ಗಾನರಸವುಳ್ಳ, ವಣ್ಡೋಡು ತುಮ್ಬಿಕಾಳ್-ಭ್ರಮರಗಳೊಡನೆ ಕೂಡಿದ ದುಂಬಿಗಳೇ!, ನುಮ್-ನಿಮ್ಮ, ಇನ ಕುರಲ್-ರಮ್ಯವಾದ ಗಾನಧ್ವನಿಯು, ಪುಣ್‌ಪುರೈ-ಹುಣ್ಣಿನ ಒಳಗೆ, ವೇಲ್‌ಕೊಡು-ಶಸ್ತ್ರವನ್ನು ಪ್ರಯೋಗಿಸಿ, ಕುತ್ತಾಲೊಕ್ಕುಮ್-ಚುಚ್ಚಿದಹಾಗೆ ಇರುವುದು. ನೀಙ್ಗಳ್-ನೀವು, ಪಣ್-ಗಾನವನ್ನು ಮಾಡಿ, ಮಿೞಱ್ಱೇಲ್ಮಿ-ಶಬ್ದಮಾಡಬೇಡಿರಿ ತಣ್-ಶೀತಳವಾದ, ಪೆರು-ತುಂಬಿದ, ನೀರ್-ನೀರುಳ್ಳ, ತಡಮ್-ತಟಾಕವು, ತಾಮರೈ ಮಲರ್‌ನ್ದಾಲೊಕ್ಕುಮ್-ವಿಕಸಿತವಾದ ತಾವರೆಹೂವುಗಳಿಂದ ಕೂಡಿರುವಂತೆ ಇರುವ, ಪೆರುಮ್ ಕಣ್-ವಿಶಾಲವಾದ ನೇತ್ರಗಳುಳ್ಳ, ಕಣ್ಣನ್-ಕೃಷ್ಣನು, ನಮ್ ಆವಿ-ನಮ್ಮ ಪ್ರಾಣವನ್ನು, ಉಣ್ಡು-ಭಕ್ಷಿಸಿ, ಎೞನ್ದನನ್-ಎದ್ದು ಹೊರಟುಹೋದನು.

( ಸ-ಗಾ-ರ ॥ )—

ಗಾನೈರೇವ ಮನೋರಮೈರ್ಮಧುಕರಾ ಯೂಯಂ ವಿಹಾರಪ್ರಿಯಾ
ಯುಷ್ಮಾಕಂ ಋತಮಸ್ತು ಮೇಽದ್ಯ ಮನಸೋ ಹನ್ತ! ವ್ರಣೇ ಶಸ್ತ್ರವತ್।
ಗಾನಂ ವಸ್ತ್ಯಜತಾದ್ಯ ಹನ್ತ! ಮಮ ಹಿ ಪ್ರಾಣಾನ್ ಹರನ್ ದೂರತಃ
ಕೃಷ್ಣೋ ಹನ್ತ! ಗತೋಽಮ್ಬುಜಾಕ್ಷಿ(?)ಯುಗಳೋ! ಹಾ! ಹನ್ತ!
ಕುರ್ಯಾಂ ಕಿಮು? ॥

ತಾ॥ ಗಾನರಸವುಳ್ಳ ಭ್ರಮರಗಳೊಡನೆ ಕೂಡಿದ ದುಂಬಿಗಳೇ! ನಿಮ್ಮ ರಮ್ಯವಾದ ಗಾನಧ್ವನಿಯು ನನಗೆ ಹುಣ್ಣಿನ ಒಳಗೆ ಶಸ್ತ್ರಪ್ರಯೋಗಮಾಡಿ ಚುಚ್ಚಿದಂತೆ ಆಗುವುದು. ಆದುದರಿಂದ ನೀವು ಗಾನಧ್ವನಿಯನ್ನು ಮಾಡಬೇಡಿರಿ. ಶೀತಳವಾದ ಪೂರ್ಣತಟಾಕವು ವಿಕಸಿತವಾದ ಕಮಲಗಳಿಂದ ಕೂಡಿ ಇರುವಂತೆ ತೋರುವ ವಿಶಾಲನೇತ್ರನಾದ ಕೃಷ್ಣನು ನಮ್ಮ ಪ್ರಾಣವನ್ನು ಭಕ್ಷಿಸಿ ಎದ್ದು ಹೊರಟುಹೋದನು.

(೧೦) ಎಙ್ಙನೇ ನಾಮುಮ್ ನಮ್ ವಾನನಾಡ-
ನೋಡೊನ್ಱಿನೋಮ್,
ಪೂಙ್ಗನೆನಾರೈಕ್ಕುರುಗಙ್ಗಳ್‌ಕಾಳ್ ಪಯಿನ್ಱೆನ್ನಿನಿ,
ಇತ್ತಿರು ನಲ್ಲವಾಕ್ಕೈಯುಮ್ ಪೈಯವೇ ಪುಯಕ್ಕಱುಂದು,
ತತ್ತೈನಲ್ಲವಿನ್ಬಮ್ ತಲೈಪ್ಪೆಯ್‌ದೆಙ್ಗುಮ್ ತಟ್ಟೈಕ್ಕವೇ.

ಪ್ರ॥ ನಾಮುಮ್-ನಾವೂ, ಎಙ್ಙನೇ – ಹೋಗಬೇಕೆಂದು ಉದ್ದೇಶಿಸಿ, ನಮ್-ನಮ್ಮ, ವಾನನಾಡನೋಡು-ಪರಮಪದನಾಥನೊಡನೆ, ಒನ್ಱಿನೋಮ್-ಹೋಗಿ ಒಂದಾಗಿ ಸೇರಿದೆವು. ಪೂಙ್ಗ ಜಲಪ್ರದೇಶಗಳಲ್ಲಿ, ನಲ್-ರಮ್ಯವಾದ, ನಾರೈಕ್ಕುರುಗಙ್ಗಳ್‌ಕಾಳ್ – ನಾರೈಪಕ್ಷಿಸಮೂಹಗಳಿರಾ!, ಇನಿ - ಇನ್ನುಮೇಲೆ, ಪಯಿನ್ಱು ಎನ್-ಕೂಡಿ ವಿಚಾರಮಾಡಿದುದರಿಂದ ಏನುಪ್ರಯೋಜನ? ಇತ್ತಿರುನಲ್ಲ-ಅವನಿಗೆ ಆಭರಣದಂತೆ ರಮಣೀಯವಾದ, ಆಕ್ಕೈಯುಮ್-(ನನ್ನ) ಶರೀರವೂ, ಪೈಯವೇ-ಕ್ರಮೇಣ, ಪುಯಕ್ಕಱುಂದು - ಶಿಥಿಲವಾಗುತ್ತಿದೆ. (ಇನ್ನುಮೇಲೆ) ಎಙ್ಗುಮ್ - ಎಲ್ಲಾ ದೇಶವೂ, ತತ್ತೈ - ವಿಸ್ತೀರ್ಣವಾಗಿ, ನಲ್ಲ-ಶ್ಲಾಘ್ಯವಾದ, ಇನ್ಬಮ್ – ಸುಖವನ್ನು, ತಲೈಪ್ಪೆಯ್‌ದು – ಪಡೆದು, ತಟ್ಟೈಕ್ಕವೇ - ಸಮೃದ್ಧಿಶಿಷ್ಟವಾಗಲಿ!

( ಶ-ಗಾ-ರ ॥ )—

ವೈಕುಣ್ಠಾಧಿಪತಿಂ ತಮೇವ ಪರಮಂ ಪ್ರಾಪ್ತುಂ ಹಿ ಸಙ್ಗಾಽಸ್ಮ್ಯಹಂ!
ಯೂಯಂ ಹನ್ತ! ಬಕಾ ವಿಹಾರರಸಿಕಾಃ ಕ್ಷೇತ್ರೋದಕೇಷು ಸ್ವಯಮ್ ।
ಕಿಂ ಸ್ಯಾದದ್ಯ ವಿಚಾರತಃ ಫಲಮಹೋ? ರಮ್ಯಂ ವಪುರ್ಮೇಽಧುನಾ
ಸೀದತ್ಯೇವ! ಸಮಸ್ತಲೋಕಸರಣಿಸ್ಸೌಖ್ಯಂ ಪರಂ ಪ್ರಾಪ್ನುತಾಮ್ ॥

ತಾ॥ ನಾವೂ ಹೋಗಬೇಕೆಂದು ಉದ್ದೇಶಿಸಿ ನಮ್ಮ ಪರಮಪದನಾಥನೊಡನೆ ಹೋಗಿ ಒಂದಾಗಿ ಸೇರಿದೆವು. ಜಲಪ್ರದೇಶಗಳಲ್ಲಿರುವ ರಮ್ಯವಾದ ನಾರೈಪಕ್ಷಿ ಸಮೂಹಗಳಿರಾ! ಇನ್ನುಮೇಲೆ ಕೂಡಿ ವಿಚಾರಮಾಡಿದುದರಿಂದ ಏನು ಪ್ರಯೋಜನ? ಅವನಿಗೆ ಆಭರಣದಂತೆ ರಮಣೀಯವಾದ ನನ್ನ ಶರೀರವೂ ಕ್ರಮೇಣ ಶಿಥಿಲವಾಗುತ್ತಿದೆ. (ಇನ್ನುಮೇಲೆ) ಎಲ್ಲಾ ದೇಶವೂ ಶ್ಲಾಘ್ಯವಾದ ಸುಖವನ್ನು ಹೊಂದಿ ಸಮೃದ್ಧಿಶಿಷ್ಟವಾಗಲಿ!

(೧೧) ಇನ್ಬವೆ ತಲ್ಬೈಪ್ಪೆಯ್‌ದೆಙ್ಗುವೆ ತಣ್ಣೃತ್ತು ಪಲ್ಲೂೞಿಕ್ಕು,
ತನ್ಪುಕಞೇತ್ತ ತ್ತನಕ್ಕರುಳ್‌ಶೆಯ್‌ದ ಮಾಯನ್ನೈ,
ತೆನ್ ಕುರುಕೂರ್ ಚ್ಚಡಕೋಪನ್ ಶೊಲ್ಲಾಯಿರತ್ತುಳ್ಳಿವ್ವೈ,
ಒನ್ ಪದೋಡೊನ್ರುಕ್ಕು ಮೂವುಲಕುಮುರುಕುಮೇ.

ಪ್ರ॥ ಇನ್ಬಮ್ - ಸುಖವನ್ನು, ತಲ್ಬೈಪ್ಪೆಯ್‌ದು - ಉಂಟುಮಾಡಲು, ಎಙ್ಗುಮ್-ಎಲ್ಲಾ ಕಡೆಗಳಲ್ಲೂ, ತಣ್ಣೃತ್ತು-ವ್ಯಾಪಿಸಿದ, ತನ್ಪುಕೞ್-ತನ್ನ ಕೀರ್ತಿಯನ್ನು, ಪಲ್ ಊೞಿಕ್ಕು-ಅನೇಕ ಕಲ್ಪಗಳವರೆಗೆ, ಏತ್ತ-ಸ್ತೋತ್ರಮಾಡುವುದಕ್ಕೆ, ತನಕ್ಕು ಅರುಳ್‌ಶೆಯ್‌ದ-ತಮಗೆ ಕೃಪೆಮಾಡಿದ, ಮಾಯನ್ನೈ-ಮಾಯಾಚೇಷ್ಟಿತನಾದ ಸ್ವಾಮಿಯನ್ನು, ತೆನ್ ಕುರುಕೂರ್-ರಮ್ಯವಾದ ಕುರುಕಾಪುರಿಯ, ಶಡಕೋಪನ್-ಶ್ರೀ ಶಠಾರಿಮುನಿಯು, ಶೊಲ್-ಸ್ತುತಿಸಲು ರಚಿಸಿದ, ಆಯಿರತ್ತುಳ್-ಸಹಸ್ರಪದ್ಯಮಾಲೆಯೊಳು, ಇವ್ವೈ ಒನ್ಪದೋಡು ಒನ್ರುಕ್ಕು-ಈ ಒಂಬತ್ತು ಪದ್ಯಗಳೊಡನೆ ಸೇರಿದ ಹತ್ತನೇ ಪದ್ಯವುಳ್ಳ ದಶಕವನ್ನು ಪಠಿಸಿದರೆ, ಮೂವುಲಕುಮ್-ಮೂರುಲೋಕಗಳೂ, ಉರುಕುಮ್-ಪ್ರೇಮದಿಂದ ದ್ರವೀಭೂತವಾಗುವುವು.

( ಸ-ಗಾ-ರ ॥ )—

ಸರ್ವವ್ಯಾಪಿ_ಮನೋರಮ_ಸ್ವಸುಗುಣಾವಲ್ಯಾ ವಶೀಕೃತ್ಯ ಚ
ಸ್ತೋತ್ರೇಽಸ್ಮಿನ್ ಕೃಪಯಾ ಪ್ರವರ್ತಯತಿ ಯಶ್ಶ್ರೀಶಸ್ತು ಮಾಯೀ ಹರಿಃ ।
ತಂ ಸಙ್ಕೀರ್ತಯಿತುಂ ಶಠಾರಿರತನೋತ್ಸಾಹಸ್ರಪದ್ಯಾವಳಿಂ!
ತತ್ರೇದಂ ತ್ರಿಜಗದ್ದ್ರವೀಕರಣತೋ ಹೃದ್ಯಂ ನವ್ಯೈಕಾತ್ಮಕಮ್ ॥

ತಾ॥ ಸರ್ವ ವ್ಯಾಪಿಯಾದ ತನ್ನ ಕೀರ್ತಿಯನ್ನು ಅನೇಕ ಕಲ್ಪಗಳವರೆಗೆ ಸ್ತೋತ್ರಮಾಡುವಂತೆ ಅನುಗ್ರಹಿಸಿದ ಮಾಯಾಚೇಷ್ಟಿತನಾದ ಸ್ವಾಮಿಯನ್ನು ಶ್ರೀ ಕುರುಕಾಪುರಿಯ ಶಠಾರಿಮುನಿಯು ಸ್ತುತಿಸಲು ರಚಿಸಿದ ಸಹಸ್ರಪದ್ಯಮಾಲೆ ಯೊಳು ಈ ದಶಕವನ್ನು ಪಠಿಸಿದರೆ ಮೂರು ಲೋಕಗಳೂ ಪ್ರೇಮದಿಂದ ದ್ರವೀ ಭೂತವಾಗುವುವು.

( ದ್ರ-ಉ-ಸಂ ॥ )—

ಆಲೋಕನಂ ಚ ತದಚಾಕ್ಷುಷಮಿತ್ಯಥಾತೋ
ದೃಷ್ಟ್ವಾ ಚ ತತ್ಸ್ಮರಣಹೇತುಪದಾರ್ಥಜಾತಮ್ ।
ಆಸನ್ನಹಾನಿಕತಯಾಽವಸಿತಸ್ಸುಸಕ್ತೋ
ದುಃಖೇನ ದುಸ್ಸಹತರೇಣ ಸ ಪಞ್ಚಮೇಽಭೂತ್ ॥

( ದ್ರ-ಉ-ತಾ-ರ ॥ )—

ಪ್ರಾಣತ್ವಾದದ್ಭುತತ್ವಾದಪಿ ಚ ಸುವಿಶದತ್ವೇನ ಭವ್ಯತ್ವಯೋಗಾತ್
ಲಕ್ಷ್ಮೀವಕ್ಷಸ್ತ್ವಭಾವಾದ್ರಘುಕುಲಜನನಾನ್ನೀಲರತ್ನಾಭಮೂರ್ತ್ಯಾ ।
ಕೃಷ್ಣತ್ವಾದಬ್ಜದೃಕ್ತ್ವಾತ್ಪರಮಪತಿತಯಾ ಚೇಶ್ವರಂ ಸಂಶ್ರಿತಾನಾ
ಮಾಚೇ ಧೀವಾರ್ಕ ಶಠಾರಿಸ್ಸ್ವಗುಣಗರಿಮಸಂಸ್ಮಾರಕಂ ಸರ್ವದರ್ಶೀ ॥

(ಈ ಪಞ್ಚಮದಶಕದ ಸಾರಾಂಶ—)

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಪಕ್ಷಿಸಮೂಹಗಳನ್ನು ಸಂಬೋಧಿಸಿ ನಾಯಕಿಯು ತನ್ನ ವಿರಹವೇದನೆ ಯನ್ನು ತಿಳಿಸುವಂತೆ ಉದ್ದೇಶಿಸಿ, ಕ್ರಮೇಣ ಹೆಣ್ಣು ಅನ್ರಿಲ್ ಪಕ್ಷಿಗಳನ್ನೂ, ಕೋಳಿಗಳನ್ನೂ, ಪೂವೈಪಕ್ಷಿಗಳನ್ನೂ, ಗಿಣಿಯುಮರಿಯನ್ನೂ, ಮೇಘಸಮೂಹ ಗಳನ್ನೂ, ಕೋಕಿಲ ಶಿಶುಗಳನ್ನೂ, ದುಂಬಿಗಳನ್ನೂ, ನಾರೈಪಕ್ಷಿಗಣಗಳನ್ನೂ ಸಂಬೋಧಿಸಿ—"ಸಂಶ್ಲೇಷಶಬ್ದವನ್ನು ಮಾಡಿ ನೀವು ನನ್ನ ಪ್ರಾಣವನ್ನು ಅಪಹರಿಸಬೇಡಿರಿ"—ಎಂದು ಪ್ರಾರ್ಥಿಸುವಂತೆ ವರ್ಣಿಸಿ ಇರುತ್ತಾರೆ.

———:❖:———

ಶ್ರೀಃ

# ನವಮಶತಕದಲ್ಲಿ—ಷಷ್ಠದಶಕ.

(ಉರುಕುಮಾಲ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮಲೈಯಾಳದೇಶದ ತಿರುಕ್ಕಾಳ್ಕರೈಯೆಂಬ ದಿವ್ಯಕ್ಷೇತ್ರದಲ್ಲಿ ಬಿಜಯಮಾಡಿರುವ ಸ್ವಾಮಿಯ ವಿಷಯದಲ್ಲಿ ವ್ಯಾಮೋಹಾತಿಶಯದಿಂದ ಅತ್ಯನ್ತ ಶಿಥಿಲಮನಸ್ಕರಾಗುತ್ತಾರೆ.)

---

(೧) ಉರುಕುಮಾಲ್ ನೆಞ್ಜಮುಯಿರಿನ್ ಪರಮನ್ಱಿ
ಪೆರುಕುಮಾಲ್ ವೇಟ್ಕೈಯುಮೆನ್ ಶೆಯ್‌ಕೇನ್ ತೊಣ್ಡನೇನ್
ತೆರುವೆಲ್ಲಾಮ್ ಕಾವಿಕಮೞ್ ತಿರುಕ್ಕಾಟ್ಕರೈ,
ಮರುವಿಯಮಾಯನ್ಱನ್ ಮಾಯಮ್ ನಿನೈತೊಱುಮೇ.

ಪ್ರ॥ ತೆರುವು ಎಲ್ಲಾಮ್-ಬೀದಿಗಳಲ್ಲೆಲ್ಲಾ, ಕಾವಿ-ಶೆಙ್ಗೞುನೀರೆಂಬ ಪುಷ್ಪದ, ಕಮೞ್—ಪರಿಮಳದಿಂದ ಭರಿತವಾದ, ತಿರುಕ್ಕಾಳ್ಕರೈ-ತಿರುಕ್ಕಾಳ್ಕರೈಯೆಂಬ ದಿವ್ಯ ಕ್ಷೇತ್ರದಲ್ಲಿ, ಮರುವಿಯ-ಆದರದಿಂದ ವಾಸಮಾಡುವ, ಮಾಯನ್ಱನ್ - ಆಶ್ಚರ್ಯ ಭೂತನಾದ ಸ್ವಾಮಿಯ, ಮಾಯಮ್-ಮಾಯಾಚೇಷ್ಟಿತಗಳನ್ನು, ನಿನೈತೊಱುಮ್-ಸ್ಮರಿಸುವವರೆಗೂ, ನೆಞ್ಜಮ್-ಮನಸ್ಸು, ಉರುಕುಮ್-ದ್ರವೀಭೂತವಾಗುವುದು. ಉಯಿರಿನ್ ಪರಮನ್ಱಿ-ಆತ್ಮಾವಿಗೆ ಸಹಿಸಲಾರದಹಾಗೆ, ವೇಟ್ಕೈಯುಮ್-ಪ್ರೀತ್ಯತಿಶಯವೂ, ಪೆರುಕುಮ್ - ಉಕ್ಕಿಬರುತ್ತಿದೆ. ಆಲ್-ಅಯ್ಯೋ! ತೊಣ್ಡನೇನ್-ಅತ್ಯನ್ತಚಪಲನಾದ ನಾನು, ಎನ್ ಶೆಯ್‌ಕೇನ್-ಏನು ಮಾಡಲಿ?

[ಆಲ್-ಅಯ್ಯೋ! ಆಶ್ಚರ್ಯದ್ಯೋತಕ]

(ಸ-ಗಾ-ರ)—

ವೀಥೀಷು ದಿವ್ಯಕುಸುಮಾವಳಿಸೌರಭಶ್ರೀ-
ಪೂರ್ಣಂ ಚ ಕಾಳ್ಕರೈ-ಮಹಾಪುರಮಾಶ್ರಿತಂ ತಮ್ |
ಸ್ಮೃತ್ವಾಽಸ್ತಿ ಮಾಯಿನಮಿದಂ ಮಮ ಚಿತ್ತಮಾರ್ದ್ರಂ
ಸಂವರ್ಧತೇಽಭಿಲಷಿತಂ ಮಮ! ಕಿನ್ನು ಕುರ್ಯಾಮ್? ||

ತಾ|| ಬೀದಿಗಳಲ್ಲೆಲ್ಲಾ ಶೆಙ್ಗೞುನೀರ್‌ಪುಷ್ಪದ ಪರಿಮಳದಿಂದ ಭರಿತವಾದ ತಿರುಕ್ಕಾಳ್ಕರೈಯೆಂಬ ದಿವ್ಯಕ್ಷೇತ್ರದಲ್ಲಿ ಆದರದಿಂದ ವಾಸಮಾಡುವ ಸ್ವಾಮಿಯ ಮಾಯಾಚೇಷ್ಟಿತಗಳನ್ನು ಸ್ಮರಿಸುವಾಗಲೆಲ್ಲಾ ನನ್ನ ಮನಸ್ಸು ದ್ರವೀಭೂತ ವಾಗುವುದು. ನನ್ನ ಆತ್ಮಾವಿಗೆ ಪ್ರೇಮಾತಿಶಯವೂ ಉಕ್ಕಿಬರುತ್ತಿದೆ. ಅಯ್ಯೋ! ಅತ್ಯನ್ತ ಚಪಲನಾದ ನಾನು ಏನುಮಾಡಲಿ ?

(೨) ನಿನ್ನೈತೊೞುಮ್ ಶೊಲ್ಲುಮ್ ತೊೞುಮ್
ನೆಞ್ಜಿಡಿನ್ದುಕುಮ್,
ಪಿನ್ನೈಕೊಳ್ ಶೀರ್‌ಪಾಡಿಲುಮ್ ವೇಮೆನದಾರುಯಿರ್,
ಶುನ್ನೈಕೊಳ್ ಪೂಮ್‌ಶೋಲೈ ತ್ತೆಣ್‌ಕಾಳ್ಕರೈಯೆನ್ನಪ್ಪಾ,
ನಿನ್ನೈಕಿಲೇನ್ ನಾನುನಕ್ಕಾಳ್ಚೆಯ್ಯುಮ್ ನೀರ್ಮೈಯೇ.

ಪ|| ಶುನ್ನೈಕೊಳ್-ತಟಾಕಗಳುಳ್ಳ, ಪೂಮ್‌ಶೋಲೈ-ಪುಷ್ಪೋದ್ಯಾನಗಳಿಂದ ಕೂಡಿದ, ತೆಣ್-ರಮ್ಯವಾದ, ಕಾಳ್ಕರೈ-ತಿರುಕ್ಕಾಳ್ಕರೈಯಲ್ಲಿರುವ, ಎನ್ ಅಪ್ಪಾ-ನನ್ನ ಸ್ವಾಮಿಯೇ!, ಪಿನ್ನೈಕೊಳ್-ನಿನ್ನ ಸಂಶ್ಲೇಷಸೂಚಕವಾದ, ಶೀರ್-ಸೌಲಭ್ಯಾದಿ ಗುಣಗಳನ್ನು, ನಿನ್ನೈತೊೞುಮ್-ಸ್ಮರಿಸುವಾಗಲೆಲ್ಲಾ, ನೆಞ್ಜು-ಮನಸ್ಸು, ಇಡಿನ್ದು-ಶಿಥಿಲವಾಗಿ, ಶೊಲ್ಲುಮ್ ತೊೞುಮ್-ವಾಕ್ಕಿನಿಂದ ಹೇಳುವವರೆಗೂ, ಉಕುಮ್-ದ್ರವೀಭೂತವಾಗುವುದು. ಪಾಡಿಲುಮ್ - ಹಾಡುತ್ತಿರುವವರೆಗೂ, ಎನದು ಆರುಯಿರ್-ನನ್ನ ಆತ್ಮತತ್ತ್ವವು, ವೇಮ್-ದಗ್ಧವಾಗುವುದು. (ಆದುದರಿಂದ) ನಾನ್-ನಾನು, ಉನಕ್ಕು - ನಿನಗೆ, ಆಳ್ಚೆಯ್ಯುಮ್ - ಕೈಙ್ಕರ್ಯಮಾಡುವ ಹಾಗೆ ಅನುಮತಿಯನ್ನು ಕೊಟ್ಟಿರುವ, ನೀರ್ಮೈ (ನಿನ್ನ) ಸೌಲಭ್ಯವನ್ನು, ನಿನ್ನೈಕಿಲೇನ್-ಸ್ಮರಿಸಲೂ ಕೂಡ ಶಕ್ತನಲ್ಲ.

( ಸ-ಗಾ-ರ || )—

ಉದ್ಯಾನವರ್ತಿಸರಸೀಯುತಕಾಳ್ಕರೈಶ್ರೀ-
ಸ್ವಾಮಿನ್! ಮಮಾರ್ಯ! ತವ ವೈಭವಮಪ್ರಮೇಯಮ್ |
ಸ್ಮೃತ್ವಾ ಮನೋ ದ್ರವತಿ ಮೇ! ವಚಸಾ ಧುನೀ ಸ್ಯಾತ್!
ಗಾನೇ ತು ದಗ್ಧಹೃದಯೋಽಸ್ಮಿ! ಕಥಂ ಭಜೇ ತ್ವಾಮ್? ||

ತಾ|| ತಟಾಕಗಳುಳ್ಳ ಪುಷ್ಪೋದ್ಯಾನಗಳಿಂದ ಕೂಡಿದ ತಿರುಕ್ಕಾಳ್ಕರೈಯಲ್ಲಿರುವ ನನ್ನ ಸ್ವಾಮಿಯೇ! ನಿನ್ನ ಸೌಲಭ್ಯಾದಿಗುಣಗಳನ್ನು ಸ್ಮರಿಸುವಾಗಲೆಲ್ಲಾ

ನನ್ನ ಮನಸ್ಸು ಶಿಥಿಲವಾಗುತ್ತಿದೆ—ವಾಕ್ಕಿನಿಂದ ಹೇಳುವಾಗ ದ್ರವೀಭೂತವಾಗುತ್ತಿದೆ, ಹಾಡುವಾಗಲೆಲ್ಲಾ ನನ್ನ ಆತ್ಮವಸ್ತುವು ದಗ್ಧವಾಗುವುದು. ಆದುದರಿಂದ ನಾನು ನಿನಗೆ ಕೈಙ್ಕರ್ಯಮಾಡಲು ಅನುಮತಿಯನ್ನು ಕೊಟ್ಟಿರುವ ನಿನ್ನ ಸೌಲಭ್ಯವನ್ನು ಸ್ಮರಿಸಲೂ ಕೂಡ ನಾನು ಶಕ್ತನಲ್ಲ.

(೩) ನೀರ್ಮೈಯಾಲ್ ನೆಞ್ಜಮ್ ವಞ್ಜಿತ್ತು ಪ್ಪುಕುನ್ದು, ಎನ್ನೈ
ಈರ್ಮೈ ಶೆಯ್ದೆನ್ನುಯಿರಾಯೆನ್ನುಯಿರುಣ್ಡಾನ್,
ಶೀರ್ಮಲ್ಕುಶೋಲೈ ತ್ತೆನ್ಕಾಟ್ಕರೈಯೆನ್ನಪ್ಪನ್,
ಕಾರ್ಮುಕಿಲ್ವಣ್ಣನ್ತನ್ ಕಳ್ವಮಱಿಕಿಲೇನ್.

ಪ್ರ|| ನೀರ್ಮೈಯಾಲ್-ಸೌಶೀಲ್ಯದಿಂದ, ನೆಞ್ಜಮ್ - (ನನ್ನ) ಮನಸ್ಸನ್ನು, ವಞ್ಜಿತ್ತು - ವಶಮಾಡಿಕೊಂಡು, ಪುಕುನ್ದು - ಪ್ರವೇಶಿಸಿ, ಎನ್ನೈ-ನನ್ನನ್ನು, ಈರ್ಮೈಶೆಯ್ದು - ಎರಡಾಗಿಮಾಡಿ, ಎನ್ ಉಯಿರಾಯ್- ನನಗೆ ಧಾರಕನಾಗಿ, ಎನ್ ಉಯಿರ್ ಉಣ್ಡಾನ್ - ನನ್ನ ಆತ್ಮಾವನ್ನು ಭುಜಿಸುವಂತಹ ಸ್ವಾಮಿಯಾದ, ಶೀರ್-ಮಧುಪುಷ್ಪಾದಿ ಸಮ್ಪತ್ತಿನಿಂದ, ಮಲ್ಕು-ಸಮೃದ್ಧವಾದ, ಶೋಲೈ-ಉದ್ಯಾನಗಳುಳ್ಳ, ತೆನ್-ರಮಣೀಯವಾದ, ಕಾಟ್ಕರೈ-ತಿರುಕ್ಕಾಟ್ಕರೈಯಲ್ಲಿ ವಾಸಮಾಡುವ, ಎನ್ ಅಪ್ಪನ್-ನನ್ನ ಉಪಕಾರಕ ಸ್ವಾಮಿಯಾದ, ಕಾರ್ಮುಕಿಲ್ ವಣ್ಣನ್-ನೀಲಮೇಘವರ್ಣನಾದ ಉದಾರಸ್ವಭಾವನ, ಕಳ್ವಮ್-ವಞ್ಚನ ಕೃತ್ಯಗಳನ್ನು, ಅಱಿಕಿಲೇನ್-(ನಾನು) ತಿಳಿಯಲಾರೆನು.

( ಸ-ಗಾ-ರ )—

ಸೌಶೀಲ್ಯತೋ ಮಮ ಮನೋ ವಶಯನ್ ಪ್ರವಿಶ್ಯ
ಮಾಂ ಚ ದ್ವಿಧಾ ಕಿಲ ವಿಭಜ್ಯ ಚ ಧಾರಕಸ್ಸನ್ |
ಭುಕ್ತ್ವಾ ಚ ಮಾಂ ಲಸತಿ ಕಾಟ್ಕರೈ—ದಿವ್ಯದೇಶೇ
ಮೇಘಾಯಿತಸ್ವತನುರಸ್ಯ ನ ವೇದ್ಮಿ ಮಾಯಾಮ್ ||

ತಾ|| ಸೌಶೀಲ್ಯದಿಂದ ನನ್ನ ಮನಸ್ಸನ್ನು ವಶೀಕರಿಸಿ ಒಳಗೆ ಪ್ರವೇಶಿಸಿ ನನ್ನನ್ನು ಎರಡಾಗಿ ಭೇದಿಸಿ ನನಗೆ ಧಾರಕನಾಗಿ ನನ್ನ ಆತ್ಮವಸ್ತುವನ್ನು ಭುಜಿಸುವಂತಹ ಸ್ವಾಮಿಯಾದ (ಮಧುಪುಷ್ಪೋದ್ಯಾನಭರಿತವಾದ) ತಿರುಕ್ಕಾಟ್ಕರೈಯಲ್ಲಿ ವಾಸಮಾಡುವ ನನ್ನ ನಾಥನಾದ, ನೀಲಮೇಘವರ್ಣನ ವಞ್ಚನಕೃತ್ಯಗಳನ್ನು ನಾನು ತಿಳಿಯಲಾರೆನು.

(೪) ಅಱಿಕಿಲೇನ್ ತನ್ನುಳನೈತ್ತುಲಕುಮ್ ನಿಱ್ಕ,
ನೆಱಿಮೈಯಾಲ್ ತಾನುಮವತ್ತುಳ್ ನಿಱ್ಕುಮ್ ಪಿರಾನ್,
ವೆಱಿಕಮಳ್ ಶೋಲೈ ತ್ತೆನ್ ಕಾಳ್ಕರೈಯೆನ್ನಪ್ಪನ್
ಶಿಱಿಯವೆನ್ನಾರುಯಿರುಣ್ಡ ತಿರುವರುಳೇ.

ಪ್ರ॥ ತನ್ನುಳ್ - ತನ್ನ ಸಙ್ಕಲ್ಪದಲ್ಲಿ, ಅನೈತ್ತು ಉಲಕುಮ್ - ಸಮಸ್ತ ಲೋಕಗಳೂ (ಸಮಸ್ತ ವಸ್ತುಗಳೂ), ನಿಱ್ಕ-ನಿಂತಿರಲು, ತಾನುಮ್-ತಾನೂ, ನೆಱಿಮೈಯಾಲ್ - ಶೇಷಶೇಷಿತ್ವಸಮ್ಬನ್ಧದಿಂದ, ಅವತ್ತುಳ್ ನಿಱ್ಕುಮ್-ಅವು, ಗಳೊಳಗೆ ನಿಲ್ಲುವ, ಪಿರಾನ್-ಸ್ವಾಮಿಯಾದ, ವೆಱಿಕಮಳ್ - ಪರಿಮಳಭರಿತವಾದ ಶೋಲೈ-ಉದ್ಯಾನಗಳುಳ್ಳ, ತೆನ್-ರಮ್ಯವಾದ, ಕಾಳ್ಕರೈ-ತಿರುಕ್ಕಾಳ್ಕರೈಯಲ್ಲಿರುವ, ಎನ್ ಅಪ್ಪನ್-ನನ್ನ ಸ್ವಾಮಿಯು, ಶಿಱಿಯ - ಸೂಕ್ಷ್ಮತಮನಾದ (ಅಲ್ಪನಾದ), ಎನ್-ನನ್ನ, ಆರ್ ಉಯಿರ್-ಪೂರ್ಣವಾದ ಆತ್ಮವಸ್ತುವನ್ನು, ಉಣ್ಡ-ಭಕ್ಷಿಸಿದ (ಅನುಭವಿಸಿದ), ತಿರು ಅರುಳೇ-ಸೌಶೀಲ್ಯರೂಪವಾದ ಉಪಕಾರಪ್ರಕಾರವನ್ನೇ, ಅಱಿಕಿಲೇನ್ - (ನಾನು) ತಿಳಿಯಲಾರೆನು.

( ಸ-ಗಾ-ರ ॥ )—

ಸ್ವಸ್ಮಿನ್ನಶೇಷಭುವನಾನಿ ದಧಾನ ಏವ
ಸ್ವೈರಂ ಸ್ವಯಂ ಚ ನಿವಸನ್ನಖಿಲೇಷು ತೇಷು ।
ಸ್ವಾಮೀ ಮಹಾಸುರಭಿ-ಕಾಳ್ಕರೈ-ನಾಯಕೋಽಸೌ
ಭುಙ್ಕ್ತೇ ಚ ಮಾಮಪಿ! ನ ವೇದ್ಮಿ ಕೃಪಾಪ್ರಕಾರಮ್ ॥

ತಾ॥ ಸಕಲಲೋಕಗಳನ್ನೂ ತನ್ನ ಸಂಕಲ್ಪದಿಂದ ವಶೀಕರಿಸಿ, ತಾನೂ ಶೇಷಶೇಷಿತ್ವ ಸಂಬನ್ಧದಿಂದ ಅವುಗಳೊಳಗೆ ನಿಂತಿರುವ ಸ್ವಾಮಿಯಾದ (ಪರಿಮಳ ಭರಿತೋದ್ಯಾನಗಳುಳ್ಳ) ತಿರುಕ್ಕಾಳ್ಕರೈಯಲ್ಲಿ ವಾಸಮಾಡುವ ನನ್ನ ನಾಥನು ಅಲ್ಪವಾದ ನನ್ನ ಆತ್ಮವಸ್ತುವನ್ನು ಭುಜಿಸಿದ ಉಪಕಾರ ಪ್ರಕಾರವನ್ನು ಇಂತಹು ದೆಂದು ನಾನು ತಿಳಿಯಲಾರೆನು.

(೫) ತಿರುವರುಳ್ ಶೆಯ್‌ಬವರ್ ಪೋಲ ವೆನ್ನುಳ್ ಪುಕುನ್ದು,
ಉರುವೆಮ್ಮುಮಾರುಯಿರುಮುಡನೇ ಯುಣ್ಡಾನ್,
ತಿರುವಳರ್ ಶೋಲೈ ತ್ತೆನ್ ಕಾಳ್ಕರೈಯೆನ್ನಪ್ಪನ್,
ಕರುವಳರ್ ಮೇನಿ ನಮ್ಮಣ್ಣನ್ ಕಳ್ವಙ್ಗಳೇ.

ಪ್ರ॥ ತಿರುವರುಳ್-ಮಹೋಪಕಾರವನ್ನು, ಶೆಯ್‌ಬರ್ವಪೋಲ - ಮಾಡುವವನಂತೆ, ಎನ್ನುಳ್‌ಪುಕುನ್ದು - ನನ್ನ ಮನಸ್ಸಿನಲ್ಲಿ ಪ್ರವೇಶಿಸಿ, ಉರುವಮುಮ್-ಶರೀರವನ್ನೂ, ಆರುಯಿರುಮ್-ಆತ್ಮವಸ್ತುವನ್ನೂ, ಉಡನೇ ಉಣ್ಡಾನ್-(ವಿಭಾಗವಿಲ್ಲದಂತೆ) ಭಕ್ಷಿಸಿದನು. (ಇವೆಲ್ಲಾ) ತಿರುವಳರ್-ಸೌನ್ದರ್ಯಭರಿತವಾದ, ಶೋಲೈ-ಉದ್ಯಾನಗಳುಳ್ಳ, ತೆನ್-ರಮ್ಯವಾದ, ಕಾಟ್ಕರೈ - ತಿರುಕ್ಕಾಟ್ಕರೈಯಲ್ಲಿರುವ, ಎನ್ ಅಪ್ಪನ್-ನನ್ನ ಸ್ವಾಮಿಯಾದ, ಕರುವಳರ್ ಮೇನಿ-ನೀಲವರ್ಣದಿಂದ ಭರಿತವಾದ ಮೂರ್ತಿಯುಳ್ಳ, ಎನ್ ಕಣ್ಣನ್-ನನ್ನ ಕೃಷ್ಣಸ್ವಾಮಿಯ, ಕಳ್ವಙ್ಗಳೇ-ಮಾಯಾಚೇಷ್ಟಿತಗಳೇ ಅಲ್ಲವೆ!

( ಸ-ಗಾ-ರ )—

ಚಿತ್ತೇ ಪ್ರವಿಶ್ಯ ಮಮ ಕಾರುಣಿಕಶ್ಶರೀರಂ
ಚಾತ್ಮಾನಮಪ್ಯಹಹ! ಮೇ ಸ್ವಯಮೇವ ಭುಕ್ತ್ವಾ |
ರಮ್ಯಾಢ್ಯಕಾಟ್ಕರೈ—ವಿಭುರ್ಜಲದಾಭಮೂರ್ತಿಃ!
ಕೃಷ್ಣಸ್ಯ ತಸ್ಯ ವಿವಿಧಾ ಹಿ ಚಕಾಸ್ತಿ ಮಾಯಾ ‖

ತಾ॥ ಮಹೋಪಕಾರವನ್ನು ಮಾಡುವವನಂತೆ ನನ್ನ ಮನಸ್ಸಿನಲ್ಲಿ ಪ್ರವೇಶಿಸಿ ನನ್ನ ಶರೀರವನ್ನೂ ಆತ್ಮವಸ್ತುವನ್ನೂ ಕೂಡ ಒಟ್ಟಿಗೆ ಭಕ್ಷಿಸಿದನು. ಇವೆಲ್ಲಾ ಸುನ್ದರೋದ್ಯಾನ ಭರಿತವಾದ ತಿರುಕ್ಕಾಟ್ಕರೈಯಲ್ಲಿ ವಾಸಮಾಡುವ ನನ್ನ ನಾಥನಾದ ನೀಲಮೇಘವರ್ಣನಾದ ಕೃಷ್ಣಸ್ವಾಮಿಯ ಮಾಯಾಚೇಷ್ಟಿತಗಳೇ ಅಲ್ಲವೆ!

(೬) ಎನ್‌ಕಣ್ಣನ್ ಕಳ್ವಮೆನಕ್ಕು ಚ್ಚೆಮ್ಮಾಯ್ ನಿಱ್ಕುಮ್,
ಅಮ್‌ಕಣ್ಣನುಣ್ಡ ವೆನ್ನಾರುಯಿರ್ ಕೋದಿದು
ಪುನ್‌ಕಣ್ಮೈ ಯೆಯ್ದಿ ಪುಲಮ್ಬಿ ಯಿರಾಪ್ಪಕಲ್,
ಎನ್‌ಕಣ್ಣನೆನ್ಱವನ್ ಕಾಟ್ಕರೈಯೇತ್ತುಮೇ.

ಪ್ರ॥ ಎನ್ ಕಣ್ಣನ್-ನನ್ನಲ್ಲಿ ಅತ್ಯನ್ತ ವ್ಯಾಮೋಹವುಳ್ಳ ಕೃಷ್ಣನ, ಕಳ್ವಮ್-ಕೃತ್ರಿಮ ವ್ಯಾಪಾರವು, ಎನಕ್ಕು-ನನಗೆ, ಶೆಮ್ಮಾಯ್ ನಿಱ್ಕುಮ್-ಸರಿಯಾಗಿಯೇ ತೋರುತ್ತಿದೆ. ಅಮ್ ಕಣ್ಣನ್-ಅತಿ ವ್ಯಾಮೋಹದಿಂದ ಚಪಲನಾದ ಅವನು, ಉಣ್ಡ-ಭಕ್ಷಿಸಿದ, ಕೋದು-ನಿಸ್ಸಾರವಾದ, ಎನ್ ಆರುಯಿರ್ ಇದು-ನನ್ನ ಈ ಆತ್ಮವಸ್ತುವು, ಪುನ್ ಕಣ್ಮೈ ಎಯ್ದಿ-ದೈನ್ಯವನ್ನು ಹೊಂದಿ, ಎನ್ ಕಣ್ಣನ್ ಎನ್ಱು-ನನಗೆಭವ್ಯನಾದವನು ಎಂದು, ಇರಾಪ್ಪಕಲ್-ರಾತ್ರಿಯೂ ಹಗಲೂ, ಪುಲಮ್ಬಿ-ಪ್ರಲಾಪಮಾಡಿ, ಅವನ್ ಕಾಟ್ಕರೈ - ಅವನ ತಿರುಕ್ಕಾಟ್ಕರೈಯನ್ನು, ಏತ್ತುಮೇ-ಸ್ತೋತ್ರಮಾಡುತ್ತಿದೆಯಷ್ಟೆ!

( ಸ-ಗಾ-ರ ॥ )—

ಕೃಷ್ಣಸ್ಯ ಕೃತ್ರಿಮಗತಿರ್ಮಮ ಭಾತಿ ಭೋಗ್ಯಾ!
ವ್ಯಾಮೋಹತಸ್ಸ ಕಿಲ ಮಾಂ ಪರಿಭುಜ್ಯ ದೀನಾಮ್।
ಮಾಂ ಮೋಹಯತ್ಯಹಹ! ಕಾಳ್ಕರೈ—ನಾಯಕಂ ತಂ
ಕೃಷ್ಣೇತಿ ಸನ್ತತಮಹಂ ಹರಿಮಾಹ್ವಯಾಮಿ ॥

ತಾ॥ ನನ್ನಲ್ಲಿ ಅತ್ಯನ್ತ ವ್ಯಾಮೋಹವುಳ್ಳ ಕೃಷ್ಣನ ಕೃತ್ರಿಮ ವ್ಯಾಪಾರವು ನನಗೆ ಉಚಿತವಾಗಿಯೇ ಇದೆ. ಅತ್ಯನ್ತ ಚಪಲನಾದ ಅವನು ಭಕ್ಷಿಸಿದ ನಿಸ್ಸಾರವಾದ ನನ್ನ ಈ ಆತ್ಮವಸ್ತುವು ದೈನ್ಯದಿಂದ—"ನನಗೆ ಭವ್ಯನಾದ ಕೃಷ್ಣನು'' ಎಂದು—ರಾತ್ರಿಯೂ ಹಗಲೂ ಪ್ರಲಾಪಮಾಡುತ್ತ ಅವನ ತಿರುಕ್ಕಾಳ್ಕರೈಯನ್ನೇ ಸ್ತೋತ್ರಮಾಡುತ್ತಿದೆ.

(೭) ಕಾಳ್ಕರೈಯೇತ್ತುಮದನುಳ್ ಕಣ್ಣಾವೆನ್ನುಮ್,
ವೇಳ್ಕೈನೋಯ್ ಕೂರ ನಿನೈನ್ದು ಕರೈನ್ದುಕುಮ್,
ಆಳ್ಕೊಳ್ವಾನೊತ್ತೆನ್ನುಯಿರುಣ್ಡ ಮಾಯನಾಲ್,
ಕೋಳ್ಕುತ್ತೈ ಪಟ್ಟದೆನ್ನಾರುಯಿರ್ ಕೋಳುಣ್ಡೇ.

ಪ್ರ॥ ಆಳ್ಕೊಳ್ವಾನೊತ್ತು - ದಾಸ್ಯವನ್ನು ಅಂಗೀಕರಿಸುವವರಂತೆ, ಎನ್ ಉಯಿರ್-ನನ್ನ ಆತ್ಮವಸ್ತುವನ್ನು, ಉಣ್ಡ-ಭಕ್ಷಿಸಿದ, ಮಾಯನಾಲ್-ಆಶ್ಚರ್ಯಭೂತನಿಂದ, ಕೋಳ್ ಉಣ್ಡೇ-ಭುಜಿಸಲ್ಪಡುತ್ತಿದ್ದಾಗ್ಯೂ, ಕೋಳ್-ಭೋಗವು, ಕುತ್ತೈಪಟ್ಟದು - ಅವಶಿಷ್ಟವಾಯಿತು. ಎನ್ ಆರುಯಿರ್- ನನ್ನ ಆತ್ಮವಸ್ತುವು, ಕಾಳ್ಕರೈ- (ಅವನ) ತಿರುಕ್ಕಾಳ್ಕರೈಯನ್ನು, ಏತ್ತುಮ್ - ಸ್ತೋತ್ರಮಾಡುತ್ತಿದೆ. ಅದನುಳ್-ಅದರೊಳು ಇರುವ, ಕಣ್ಣಾ ಎನ್ನುಮ್-"ಕೃಷ್ಣ!'' ಎಂದು ಕರೆಯುತ್ತಿರುವುದು. (ಮತ್ತು) ವೇಳ್ಕೈನೋಯ್ - ಅಭಿನಿವೇಶವೆಂಬ ವ್ಯಾಧಿಯು, ಕೂರ-ಪ್ರಬಲವಾಗಲು, ನಿನೈನ್ದು - ಅವನ ಸಂಶ್ಲೇಷವನ್ನು ಸ್ಮರಿಸಿ, ಕರೈನ್ದು-ಶಿಥಿಲವಾಗಿ, ಉಕುಮ್-ದ್ರವೀಭೂತವಾಗುವುದು.

( ಸ-ಗಾ-ರ ॥ )—

ಮಾಯಾವಿನಾ ಮಮ ಹೃದಬ್ಜತಲೇ ಪ್ರವಿಶ್ಯ
ಭುಕ್ತೋಽಪಿ ಭೋಗಮವಶೇಷಿತಮೇವ ಮತ್ವಾ।
ಆತ್ಮಾ ಸ್ತವೀತಿ ಮಮ ಕಾಳ್ಕರೈ-ನಾಯಕಂ ತಂ
ಕೃಷ್ಣಂ ಹಿ ಕಾಮವಿವಶಶ್ಶಿಥಿಲೋ ದ್ರವೇಚ್ಚ ॥

ತಾ॥ ನನ್ನ ಆತ್ಮವಸ್ತುವು ಮಾಯಾಚೇಷ್ಟಿತನಾದ ಆ ಸ್ವಾಮಿಯಿಂದ ಭುಜಿಸಲ್ಪಡುತ್ತಿದ್ದಾಗ್ಯೂ ಆ ಭೋಗವು ಅವಶಿಷ್ಟವಾಯಿತೆಂದು ತಿಳಿದು ಅವನ ತಿರುಕ್ಕಾಳ್ಕರೈಯನ್ನೇ ಸ್ತೋತ್ರಮಾಡುತ್ತಿದೆ. "ಅದರೊಳು ಇರುವ ಕೃಷ್ಣ"— ಎಂದು ಕರೆಯುತ್ತಿದೆ. ಮತ್ತು ಅತ್ಯಂತ ಪ್ರಬಲವಾದ ಅಭಿನಿವೇಶದಿಂದ ಅವನ ಸಂಶ್ಲೇಷವನ್ನೇ ಸ್ಮರಿಸಿ ಶಿಥಿಲವಾಗಿ ದ್ರವೀಭೂತವಾಗುತ್ತಿದೆ.

(೮) ಕೋಳುಣ್ಡಾನನ್ರಿ ವನ್ದೆನ್ನುಯಿರ್ ತಾನುಣ್ಡಾನ್,
ನಾಳುನಾಳ್ ವನ್ದೆನ್ನೈ ಮುಱ್ಱವುಮ್ ತಾನುಣ್ಡಾನ್,
ಕಾಳನೀರ್ಮೇಕ ತ್ತೆನ್ಕಾಳ್ಕರೈ ಯೆನ್ನಪ್ಪರ್ಕ್ಕು,
ಆಳನ್ರಿ ಪಟ್ಟದೆನ್ನಾರುಯಿರ್ ಪಟ್ಟದು

ಪ್ರ॥ ಕೋಳುಣ್ಡಾನ್-(ನನ್ನನ್ನು)ಭುಜಿಸಿದನು, ಅನ್ರಿ-ಅದೂ ಅಲ್ಲದೆ, ವನ್ದು-ನಿಷ್ಕಾರಣವಾಗಿ ಬಂದು, ಎನ್ ಉಯಿರ್-ನನ್ನ ಆತ್ಮವಸ್ತುವನ್ನು, ತಾನ್ ಉಣ್ಡಾನ್, ತಾನೇ ಭುಜಿಸಿದನು. (ಮತ್ತೂ) ನಾಳುನಾಳ್-ಪ್ರತಿದಿನವೂ, ವನ್ದು-ಅಪೂರ್ವವಾಗಿ ಬಂದು, ಎನ್ನೈ-ನನ್ನನ್ನು, ಮುಱ್ಱವುಮ್ ತಾನ್ ಉಣ್ಡಾನ್-ನಿಶ್ಶೇಷವಾಗಿ ತಾನೇ ಭುಜಿಸಿದನು. ಕಾಳನೀರ್ ಮೇಕ-ನೀಲವಾದ ನೀರುಳ್ಳ ಮೇಘದಂತೆ, ತೆನ್-ರಮ್ಯವಾದ, ಕಾಳ್ಕರೈ - ತಿರುಕ್ಕಾಳ್ಕರೈಯಲ್ಲಿರುವ, ಎನ್ ಅಪ್ಪರ್ಕ್ಕು - ನನ್ನ ಸ್ವಾಮಿಗೆ, ಆಳ್ಪಟ್ಟದು ಅನ್ರಿ-ದಾಸ್ಯವನ್ನು ಮಾಡುತ್ತಿದೆಯಷ್ಟೆ! ಇದೇ ತಾನೇ! ಎನ್ ಆರುಯಿರ್ ಪಟ್ಟದು- ನನ್ನ ಆತ್ಮವಸ್ತುವು ಅನುಭವಿಸುತ್ತಿರುವುದು!

( ಸ-ಗಾ-ರ )—

ಭುಕ್ತ್ವಾ ಚ ದೇಹಮಪಿ ಮೇ ಸ್ವಯಮಾಗತೋಽಯಂ
ಚಾತ್ಮಾನಮಪ್ಯಹಹ! ಮೇಽತ್ರ ದಿನೇ ದಿನೇ ಚ |
ನಿಶ್ಶೇಷಮೇವ ಪರಿಭುಜ್ಯ ಚಕಾಸ್ತಿ ಮೇಘ-
ಶ್ಯಾಮಶ್ಚ ಕಾಳ್ಕರೈಪ್ರಭುರಹೋ! ಮಮ ದಾಸ್ಯ ಮಾದ್ಯತ್ ||

ತಾ॥ ಅವನು ನನ್ನ ಶರೀರವನ್ನು ಭುಜಿಸಿದುದು ಮಾತ್ರವೇ ಅಲ್ಲದೆ ನನ್ನ ಆತ್ಮವಸ್ತುವನ್ನು ಕೂಡ ನಿಷ್ಕಾರಣವಾಗಿ ಬಂದು ಭುಜಿಸಿದನು. ಮತ್ತು ಪ್ರತಿದಿನವೂ ಅಪೂರ್ವವಾಗಿ ಬಂದು ನನ್ನನ್ನು ನಿಶ್ಶೇಷವಾಗಿ ಭುಜಿಸಿದನು. ನೀಲ ಮೇಘದಂತೆ ರಮ್ಯವಾದ ರೂಪವುಳ್ಳ ನಮ್ಮ ತಿರುಕ್ಕಾಳ್ಕರೈ ಕ್ಷೇತ್ರದ ಸ್ವಾಮಿಗೇ ನನ್ನ ಆತ್ಮವಸ್ತುವು ದಾಸ್ಯವನ್ನು ಮಾಡುತ್ತಿದೆ. ಇದೇತಾನೇ ನನ್ನ ಆತ್ಮವಸ್ತುವಿನ ಅನುಭವಪ್ರಕಾರವು!

(೯) ಆರುಯಿರ್‌ಪಟ್ಟದೆನದುಯಿರ್‌ಪಟ್ಟದು,
ಪೇರಿದಳ್‌ತಾಮರೈಕ್ಕಣ್‌ಕನಿವಾಯದೋರ್,
ಕಾರೆಳಿಲ್ ಮೇಕತ್ತೇ ಕಾಟ್ಕರೈಕೋಯಿಲ್‌ಕೊಳ್,
ಶೀರೆಳಿಲ್ ನಾಲ್‌ತಡನ್ದೋಳ್‌ತೆಯ್‌ವವಾರಿಕ್ಕೇ.

ಪ್ರ॥ ಪೇರ್ ಇದಳ್-ವಿಶಾಲವಾದ ದಳಗಳುಳ್ಳ, ತಾಮರೈ-ತಾವರೆ ಹೂವಿನಂತೆ ಇರುವ, ಕಣ್-ನೇತ್ರಗಳನ್ನೂ, ಕನಿ-ಬಿಮ್ಬಫಲದಂತೆ ಕೆಂಪಾದ, ವಾಯದು-ಬಾಯನ್ನೂ ಉಳ್ಳ, ಓರ್-ಅದ್ವಿತೀಯವಾದ, ಕಾರ್ ಎಳಿಲ್-ನೀಲವರ್ಣವುಳ್ಳ, ಮೇಕ- ಮೇಘದಂತೆ, ತೇ - ರಮ್ಯವಾದ, ಕಾಟ್ಕರೈ - ತಿರುಕ್ಕಾಟ್ಕರೈಯನ್ನು, ಕೋಯಿಲ್‌ಕೊಳ್ - ವಾಸಸ್ಥಾನವಾಗಿ ಮಾಡಿಕೊಂಡು, ಶೀರ್ ಎಳಿಲ್-ವೀರಶ್ರೀಯನ್ನೂ ಕಾನ್ತಿಯನ್ನೂ ಉಳ್ಳ, ನಾಲ್ ತಡನ್ದೋಳ್-ನಾಲ್ಕು ಮಹಾಭುಜಗಳುಳ್ಳ, ತೆಯ್‌ವ ವಾರಿಕ್ಕೇ-ದೇವತೆಗಳಿಗೆಲ್ಲಾ ಉತ್ಪತ್ತಿಸ್ಥಾನವಾದ ಸಮುದ್ರಪ್ರಾಯನಿಗೆ, ಎನದು ಉಯಿರ್‌ಪಟ್ಟದು - ನನ್ನ ಆತ್ಮವಸ್ತುವು ಭೋಗ್ಯವಾಗಿ ಅನುಭವಿಸುತ್ತಿದ್ದುದು ಎಂತಹುದು!, ಆರ್ ಉಯಿರ್ ಪಟ್ಟದು - ನಿತ್ಯಾನುಭವವನ್ನು ಮಾಡುವ ದಿವ್ಯಸೂರಿಗಳು ತಾನೇ ಇಂತಹ ಅನುಭವವನ್ನು ಪಡೆದರೋ?

( ಸ-ಗಾ-ರ ॥ )—

ಬಿಮ್ಬಾಧರಶ್ಚ ಸರಸೀರುಹಲೋಚನೋಽಯಂ
ನೀಲಾಮ್ಬುದಾಭ ಇಹ ಕಾಟ್ಕರೈ-ವಾಸಶೀಲಃ ।
ಶ್ರೀಮಚ್ಚತುರ್ಭುಜಧರೋಽಸ್ತಿ ಹಿ ದೇವಬೀಜೋ !
ಭೋಗ್ಯೋಽಹಮಸ್ಮಿ ಕಿಲ ತಸ್ಯ! ಸಮೋಽದ್ಯ ಕೋ ಮೇ ? ॥

ತಾ॥ ಪುಣ್ಡರೀಕಾಕ್ಷನಾಗಿಯೂ ಬಿಮ್ಬಾಧರವುಳ್ಳವನಾಗಿಯೂ ನೀಲಮೇಘಶ್ಯಾಮನಾಗಿಯೂ ಇರುವ ನನ್ನ ಸ್ವಾಮಿಯು ತಿರುಕ್ಕಾಟ್ಕರೈಯಲ್ಲಿ ವಾಸಮಾಡುತ್ತ, ವೀರಶ್ರೀ - ದಿವ್ಯಕಾನ್ತಿಯುಕ್ತನಾಗಿ ಚತುರ್ಭುಜನಾಗಿಯೂ ದೇವತೆಗಳಿಗೆಲ್ಲಾ ಮೂಲಭೂತನಾಗಿಯೂ ಇರುವುದರಿಂದ ಅವನಿಗೇ ನನ್ನ ಆತ್ಮವಸ್ತುವು ಭೋಗ್ಯವಾಗಿದೆ. ಈ ನನ್ನ ದಿವ್ಯಾನುಭವವು ಎಂತಹುದೋ ! ನಿತ್ಯಾನುಭವವನ್ನು ಮಾಡುವ ದಿವ್ಯಸೂರಿಗಳಿಗೆ ತಾನೇ ಇಂತಹ ಅನುಭವವು ಉಂಟೇ ?

(೧೦) ವಾರಿಕ್ಕೊಣ್ಡುನ್ನೈ ವಿೞುಙ್ಗುವನ್ ಕಾಣಿಲೆನ್ಱು,
ಆರ್ವುಱ್ಱವೆನ್ನೈ ಯೊೞಿಯವೆನ್ನಿಲ್ ಮುನ್ನಮ್
ಪಾರಿತ್ತು, ತಾನೆನ್ನೈ ಮುಱ್ಱ ಪ್ಪರುಕಿನಾನ್,
ಕಾರೊಕ್ಕುಮ್ ಕಾಟ್ಕರೈಯಪ್ಪನ್ ಕಡಿಯನೇ.

ಪ್ರ|| ಉನ್ನೈ-ನಿನ್ನನ್ನು, ಕಾಣಿಲ್ - ಕಣ್ಡರೆ, ವಾರಿಕ್ಕೊಣ್ಡು-ಸ್ವರೂಪ ರೂಪಗುಣ ವಿಭೂತಿಗಳಲ್ಲಿ ಸ್ವಲ್ಪವೂ ಅವಶಿಷ್ಟವಾಗದಂತೆ, ವಿೞುಙ್ಗುವನ್ ಎನ್ಱು-ಕಬಳೀಕರಿಸುವೆನು ಎಂದು, ಆರ್ವುಱ್ಱ-ಆದರವಮಾಡಿದ, ಎನ್ನೈ ಒೞಿಯ-ನನ್ನನ್ನು ಅನುಭವಿಸಿದ ಮಾತ್ರವೇ ಅಲ್ಲದೆ, ಎನ್ನಿಲ್ ಮುನ್ನಮ್-ನನಗಿಂತ ಮುಂಚೆಯೇ, ಪಾರಿತ್ತು-ಅತಿ ಪ್ರೀತಿಮಾಡಿ, ತಾನ್-ಅಪರಿಚ್ಛಿನ್ನ ಸ್ವರೂಪನಾದ ತಾನು, ಎನ್ನೈ-ನನ್ನನ್ನು, ಮುಱ್ಱ-ಪೂರ್ಣವಾಗಿ, ಪರುಕಿನಾನ್-ಪಾನಮಾಡಿದನು (ಅನುಭವಿಸಿದನು). ಕಾರ್ ಒಕ್ಕುಮ್-ಸಮುದ್ರವನ್ನು ಪಾನಮಾಡುವ ಮೇಘದಂತೆ, ಕಾಟ್ಕರೈ - ತಿರುಕ್ಕಾಟ್ಕರೈಯಲ್ಲಿ ನಿಲ್ಲುತ್ತಿರುವ, ಅಪ್ಪನ್ - ಸ್ವಾಮಿಯು, ಕಡಿಯನ್-(ನನ್ನ) ಅನುಭವದಲ್ಲಿ ಅತಿ ತ್ವರೆಯುಳ್ಳವನು

( ಸ-ಗಾ-ರ || )—

ಪಶ್ಯಾಮಿ ಚೇದಹಮಶೇಷಮಪಿ ತ್ವದೀಯಂ
ಭುಞ್ಜೇ ಕಿಲೇತ್ಯಖಿಲಷನ್ತಮತೀತ್ಯ ಮಾಂ ಚ |
ಮೇಘಾಯಿತಃ ಕಿಲ ಚಿರಾತ್ತು ನಿಪೀಯ ಪೂರ್ಣಂ
ಶ್ರೀಕಾಟ್ಕರೈ-ಪ್ರಭುರಸೌ ತ್ವರಯಾಽನುಭುಙ್ಕ್ತೇ ||

ತಾ|| "ನಿನ್ನನ್ನು ಕಂಡರೆ ಸ್ವಲ್ಪವೂ ಅವಶಿಷ್ಟವಾಗದಂತೆ ಪರಿಪೂರ್ಣವಾಗಿ ಕಬಳೀಕರಿಸಿ ಭುಜಿಸುವೆನು"—ಎಂದು ಅತ್ಯಾದರದಿಂದ ನನ್ನನ್ನು ಅವನು ಅನುಭವಿಸಿ, ನನಗಿಂತ ಮುಂಚೆ ನನ್ನಲ್ಲಿ ಅತಿಪ್ರೀತಿಮಾಡಿ ನನ್ನನ್ನು ಪೂರ್ಣವಾಗಿ ಪಾನಮಾಡಿಬಿಟ್ಟನು. ನೀಲಮೇಘಸದೃಶನಾದ ತಿರುಕ್ಕಾಟ್ಕರೈಯಲ್ಲಿರುವ ಸ್ವಾಮಿಯು ಸಮುದ್ರವನ್ನು ಪಾನಮಾಡುವ ಮೇಘದಂತೆ ನನ್ನನ್ನು ಅನುಭವಿಸಲು ಅತಿತ್ವರೆಯುಳ್ಳವನಾಗಿದಾನೆ.

(೧೧) ಕಡಿಯನಾಯ್ ಕ್ಕಞ್ಜನ್ನೈ ಕ್ಕೊನ್ಱಪಿರಾನ್ ತನ್ನೈತ್ತ್,
ಕೊಡಿಮದಿಳ್ ತೆನ್ಕುರುಕೂರ್ ಚ್ಚಡಕೋಪನ್ ಶೊಲ್,
ವಡಿವಮ್ಮೈಯಾಯಿರತ್ತಿಪ್ಪತ್ತಿನಾಲ್, ಶನ್ಮವೆ
ಮುಡಿವೆಯ್‌ದಿ ನಾಶಙ್ಕಣ್ಡೀರ್ ಕಳೆಙ್ಕಾನಲೇ.

ಪ್ರ|| ಕಡಿಯನಾಯ್ – ಅತಿ ಕ್ರೂರಹೃದಯನಾಗಿ (ಅವನಿಗಿಂತ ಮುಂಚೆ ಸಙ್ಕಲ್ಪಮಾಡಿ), ಕಞ್ಜನ್ನೈಕ್ಕೊನ್ಱ-ಕಂಸನನ್ನು ಕೊಂದ, ಪಿರಾನ್‌ತನ್ನೈ-ಸ್ವಾಮಿಯಾದ ಕೃಷ್ಣನನ್ನು, ಕೊಡಿಮದಿಳ್-ಧ್ವಜಗಳೊಡನೆ ಕೂಡಿದ ಪ್ರಾಕಾರಗಳುಳ್ಳ, ತೆನ್‌ಕುರುಕೂರ್-ರಮ್ಯವಾದ ಕುರುಕಾಪುರಿಯ, ಶಡಕೋಪನ್-ಶ್ರೀ ಶಠಾರಿಮುನಿಯು, ಶೊಲ್-ಸ್ತುತಿಸಲು ರಚಿಸಿದ, ವಡಿವು ಅಮ್ಮೈ-ಭಗವದ್ಗುಣಗಳನ್ನು ಪೂರ್ಣವಾಗಿ ಅನುಭವಿಸುವ ರೂಪವುಳ್ಳ, ಆಯಿರತ್ತು – ಸಹಸ್ರಪದ್ಯಮಾಲೆಯೊಳು, ಇಪ್ಪತ್ತಿನಾಲ್-ಈ ದಶಕದಿಂದ, ಎಮ್ ಶನ್ಮಮ್-ನಮ್ಮ ಜನ್ಮಪರಮ್ಪರೆಯು, ಮುಡಿವು ಎಯ್‌ದಿ-ನಾಶವನ್ನು ಹೊಂದಿ, ಕಾನಲ್-ಸಂಸಾರತಾಪವೂ, ನಾಶಮ್ ಕಣ್ಡೀರ್-ನಷ್ಟವಾಗಿ ನಮಗೆ ಸುಖವುಂಟಾಗುವುದು ! (ಇದು ಸತ್ಯ !)

( ಸ-ಗಾ-ರ || )—

ಕಂಸಂ ನಿಹತ್ಯ ಚ ರುಷಾ ಜಗತಾಂ ಚ ಬನ್ಧು-
ರ್ಯಸ್ತಂ ಸ್ತುವನ್ ಶಠರಿಪುಃ ಕುರುಕಾಪುರೀಶಃ |
ಸಾಹಸ್ರಮಾಹ ಪರಮಂ! ದಶಕಂ ಕಿಲೇದಂ
ಸಂಸಾರತಾಪಶಮನಂ ಪಠತಾಂ ಸುಖಾಯ ||

ತಾ|| ಕಂಸನನ್ನು (ತನ್ನ ತೀವ್ರಸಙ್ಕಲ್ಪದಿಂದ) ಧ್ವಂಸಮಾಡಿದ ಶ್ರೀ ಕೃಷ್ಣನನ್ನು ಧ್ವಜಪ್ರಾಕಾರಾವೃತವಾದ ಕುರುಕಾಪುರಿಯ ಶಠಾರಿಮುನಿಯು ಸ್ತುತಿಸಲು ರಚಿಸಿದ ಭಗವದ್ಗುಣಾನುಭವ ಪರಿಪೂರ್ಣವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನಮಾಡುವುದರಿಂದ ಜನ್ಮಪರಮ್ಪರೆಯು ನಾಶವನ್ನು ಹೊಂದುವುದು ; ಮತ್ತು ಸಂಸಾರತಾಪವು ಶಾನ್ತವಾಗಿ ನಮಗೆ ನಿತ್ಯಸುಖವುಂಟಾಗುವುದು.

( ದ್ರ-ಉ-ಸಂ || )—

ಸ್ವಸ್ಯಾತ್ಮತಾಮುಗಣಯನ್ ಸ್ವಯಮರ್ಥಯಿತ್ವಾ
ಸ್ವಂ ಪ್ರಾಪ್ಯ ಹರ್ಷವಿವಶೋ ಹರಿರಿತ್ಯಧಸ್ತಾತ್ |
ಯಚ್ಛೀಲಮನ್ವಭವದಸ್ಯ ತದೇವ ದೈವಾತ್
ಸಂಸ್ಮೃತ್ಯ ಸ ದ್ರುತಮನಾ ವ್ಯಸನೀ ಚ ಷಷ್ಠೇ ||

( ದ್ರ-ಉ-ತಾ-ರ ॥ )—

ಆಶ್ಚರ್ಯೇಹಾನ್ವಿತತ್ವಾದಖಿಲಪತಿತಯಾ ಚಾನ್ತರಾತ್ಮತ್ವಭೂಮ್ನಾ
ಶಕ್ತೇಃ ಶಕ್ತತ್ವಭೂಮ್ನಾ ಜಲದತನುತಯಾ ಭವ್ಯತಾಕರ್ಷಕತ್ವಾತ್ ।
ಔದಾರ್ಯಾದೇರ್ವಿಶಿಷ್ಟಾದಪಿ ಚ ಭವಭೃತಾಂ ರಕ್ಷಣೇ ತೀವ್ರಸಙ್ಗಾ-
ದ್ವಿಸ್ಮರ್ತುಂ ನೈವ ಶಕ್ಯೋ ಹರಿರಿತಿ ಶಠಜಿತ್ಕಂಸಜೇತಾರಮಾಹ ॥

(ಈ ಷಷ್ಠದಶಕದ ಸಾರಾಂಶ—)

ಈ ಆರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಿರುಕ್ಕಾಟ್ಕರೈಯಲ್ಲಿ ಬಿಜಯಮಾಡಿರುವ ಸ್ವಾಮಿಯ ವಿಷಯದಲ್ಲಿ ವ್ಯಾಮೋಹಾತಿಶಯದಿಂದ, ಅವನ ಮಾಯಾಚೇಷ್ಟಿತಗಳನ್ನೂ ಸೌಲಭ್ಯಾದಿ ಗುಣಗಳನ್ನೂ ವಟ್ಟಾನಕೃತ್ಯಗಳನ್ನೂ ಶೇಷಶೇಷಿತ್ವಸಮ್ಬನ್ಧವನ್ನೂ ಶರೀರಾತ್ಮಭೋಗಪ್ರಕಾರಗಳನ್ನೂ ಸ್ಮರಿಸಿ ಸ್ಮರಿಸಿ, ಮನಶ್ಶೈಥಿಲ್ಯದಿಂದ ದ್ರವೀಭೂತರಾಗಿ (ಕಂಸಧ್ವಂಸಕನಾದ) ಶ್ರೀ ಕೃಷ್ಣರೂಪಿಯಾದ ಅವನು ತಮ್ಮ ಆತ್ಮವಸ್ತುವನ್ನು ಸಂಪೂರ್ಣವಾಗಿ ಕಬಳೀಕರಿಸಿ ಅನುಭವಿಸಿದ ಭೋಗಾತಿಶಯವು ದಿವ್ಯಸೂರಿಗಳಿಗೂ ಅಲಭ್ಯವೆಂದು ನಿರ್ಣಯಿಸಿ ಅತ್ಯನ್ತ ಸನ್ತುಷ್ಟರಾಗಿದಾರೆ.

——:❖:——

ಶ್ರೀಃ

## ನವಮಶತಕದಲ್ಲಿ—ಸಪ್ತಮದಶಕ.

( ಎ ಙ್ಗ್ ನ ಲ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯನ್ನು ಹೊಂದಿ, ಮಲೈಯಾಳದೇಶದಲ್ಲಿರುವ ತಿರುಮೂೞಿಕ್ಕಳವೆಂಬ ಕ್ಷೇತ್ರದ ಸ್ವಾಮಿಯಾದ ಸರ್ವೇಶ್ವರನ ಸೌನ್ದರ್ಯಾದ್ಯನುಭವಕ್ಕಾಗಿ ಅತ್ಯಾಶೆಯಿಂದ ಕೆಲವು ಪಕ್ಷಿಗಳನ್ನು ದೂತಕೃತ್ಯದಲ್ಲಿ ಪ್ರೇರಿಸುತ್ತಾರೆ.)

(೧) ಎಙ್ಗಾನಲಕಙ್ಗೞಿವಾಯಿರ್ಕ್ಕೆ ತೇರ್ನ್ದಿಙ್ಗನಿದವುರುವೀರ್,
ಶೆಙ್ಗಾಲಮಡನಾರಾಯ್ ತಿರುಮೂೞಿಕ್ಕಳತ್ತುಱೈಯುಮ್,
ಕೊಙ್ಗಾರ್ ಪೂಙ್ತುೞಾಯ್ ಮುಡಿಯೆಙ್ಗುಡಕ್ಕೂತ್ತರ್-
ಕ್ಕೆನ್ತೂದಾಯ್,
ನುಙ್ಗಾಲ್ಕಳೆನ್ ತಲೈಮೇಲ್ ಕೆೞುಮೀರೋ ನುಮರೋಡೇ.

ಪ್ರ|| ಎಮ್-ನಮ್ಮ, ಕಾನಲ್-ಸಮುದ್ರತೀರದ ಉದ್ಯಾನದ, ಅಕಮ್-ಒಳಗೆ, ಕೞಿವಾಯ್ - ಕೞಿಯೆಂಬ ಕಂದಕಪ್ರದೇಶದಲ್ಲಿ, ಇರೈ-ಆಹಾರವನ್ನು, ತೇರ್‌ನ್ದು - ಹುಡುಕಿಕೊಂಡು, ಇಙ್ಗು - ಇಲ್ಲಿ, ಇಸೈದು-ಮನಃಪ್ರೀತಿಯೊಡನೆ, ಅಮರುಮ್-ಹೊಂದಿಕೊಂಡಿರುವ, ಶೆಮ್‌ಕಾಲ-ಕೆಂಪಾದ ಕಾಲುಗಳುಳ್ಳ, ಮಡ-ಭವ್ಯವಾದ, ನಾರಾಯ್-ನಾರೈಯೆಂಬ ಪಕ್ಷಿಯೇ!, ತಿರುಮೂೞಿಕ್ಕಳತ್ತು-ತಿರುಮೂೞಿಕ್ಕಳದಲ್ಲಿ, ಉತ್ತೈಯುಮ್-ನಿತ್ಯವಾಸಮಾಡುವ, ಕೊಙ್ಗು ಅರ್-ಮಧುಭರಿತವಾದ, ಪೂಮ್-ರಮ್ಯವಾದ, ತುೞಾಯ್-ತುಳಸಿಯಿಂದ ಅಲಂಕೃತವಾದ, ಮುಡಿ-ಶಿರಸ್ಸುಳ್ಳ, ಎಮ್ ಕುಡಕ್ಕೂತ್ತಱ್ಕು - ನಮ್ಮ ಘಟಲೀಲಾಲೋಲನಾದ ಸ್ವಾಮಿಗೆ, ಎನ್ ತೂದಾಯ್-ನನ್ನ ದೂತನಾಗಿ, ನುಮರೋಡು - ನಿನ್ನ ಪಕ್ಷೀಪುತ್ರಾದಿ ಪರಿವಾರಗಳೊಡನೆ ನಡೆದ, ನುಮ್‌ಕಾಲ್‌ಕಳ್-ನಿಮ್ಮ ಕಾಲುಗಳನ್ನು, ಎನ್ ತಲೈಮೇಲ್-ನನ್ನ ತಲೆಯಮೇಲೆ, ಕೊಳ್ಳವಿರಾರ್-ಇಡು.

( ಸ-ಗಾ-ರ )—

ಆಹಾರಂ ಜಲಧೇಸ್ತಟೇಷು ಚ ವನೇಷ್ವನ್ವಿಷ್ಯ ಸಂಚಾರಿಣಿ!
ತ್ವಂ ಮತ್ಪ್ರೀತಿಯುತೇ ಚ ಶೋಣಿತಪದೇ! ಭವ್ಯೇ! ಬಲಾಕಾಹ್ವಯೇ!
ಶ್ರೀಮೂೞಿಕ್ಕಳನಾಯಕಂ ಚ ತುಲಸೀಮಾಲಾಢ್ಯಮೌಳಿಂ ಪ್ರತಿ
ತ್ವಂ ದೂತೀಭವ! ಸಂಚರತ್ಪದಯುಗಂ ತೇ ಮೇಽದ್ಯ ಶೀರ್ಷೇ ಕುರು ||

ತಾ|| ಸಮುದ್ರತೀರದ ಉದ್ಯಾನದಲ್ಲಿ ಜಲಪ್ರದೇಶದಲ್ಲಿ ಆಹಾರವನ್ನು ಹುಡುಕಿಕೊಂಡು ಪರಸ್ಪರ ಪ್ರೀತಿಯೊಡನೆ ವರ್ತಿಸುವ ನಾರಾಯ್‌ಪಕ್ಷಿಯೇ! ತಿರುಮೂೞಿಕ್ಕಳದಲ್ಲಿ ವಾಸಮಾಡುತ್ತಿರುವ ದಿವ್ಯ ತುಲಸೀಮಾಲಾಲಂಕೃತ ಶಿರಸ್ಕನಾದ ನಮ್ಮ ಕುಂಭಲೀಲಾಲೋಲನಾದ ಸ್ವಾಮಿಗೆ ನೀನು ನನ್ನ ದೂತನಾಗಿ ಸಪರಿವಾರನಾಗಿ ನಡೆದು ಹೋಗಿ ಆ ಕಾಲುಗಳನ್ನು ನನ್ನ ತಲೆಯಮೇಲೆ ಇಡು.

(೨) ನುಮರೊಡುಮ್ ಪಿರಿಯಾದೇ ನೀರುಮ್ ನುಮ್‌ಶೇವಲುಮಾಯ್,
ಅಮರ್‌ಕಾದಲ್ ಕುರುಕಿನಙ್ಗಾಳ್‌ತಿರುಮೂೞಿಕ್ಕಳತ್ತು—ಉತ್ತೈಯುಮ್,
ಎಮರಾಲುಮ್ ಪೞಿಪ್ಪುಣ್ಡು ಇಙ್ಗನ್ ತಮ್ಮಾಲಿೞಿಪ್ಪುಣ್ಡು,
ತಮರೋಡಙ್ಗುತ್ತೈವಾರ್‌ಕ್ಕು ತ್ತಕ್ಕಿಲಮೇ ಕೇಳೀರೇ.

ಪ್ರ॥ ನುಮರೋಡುಮ್ - ನಿಮ್ಮ ಬನ್ಧುಗಳೊಡನೆ, ಪಿರಿಯಾದೇ-ಬೇರೆಯಾಗದೆ, ನೀರುಮ್-ನೀವೂ, ನುಮ್ ಶೇವಲುಮಾಯ್-ನಿಮ್ಮ ನಾಯಕಮಣಿಗಳೊಡನೆ, ಆಮರ್ - ಸೇರಿಕೊಂಡಿರುವ, ಕಾದಲ್ - ಪ್ರೀತಿಯುಳ್ಳ, ಕುರುಕು ಇನಙ್ಗಾಳ್-ಕುರುಕು ಪಕ್ಷಿಗಳ ಸಮೂಹಗಳೇ, ಅಣಿ-ಅಲಂಕಾರ ರೂಪವಾದ, ಮೂೞಿಕ್ಕಳತ್ತು - ತಿರುಮೂೞಿಕ್ಕಳದಲ್ಲಿ, ಉಱೈಯುಮ್-ನಿತ್ಯವಾಸಮಾಡುವ, ತಮ್ಮಾಲ್ - ಸ್ವಾಮಿಯಾದ ತಮ್ಮಿಂದ, ಇೞಿಪ್ಪು ಉಣ್ಡು-ಅನಾದರಿಸಲ್ಪಟ್ಟು, ಎಮರಾಲುಮ್-ನಮ್ಮ ಬನ್ಧುಗಳಿಂದಲೂ, ಪೞಿಪ್ಪು ಉಣ್ಡು - ನಿಂದಿಸಲ್ಪಟ್ಟು, ಇಙ್ಗು ಎನ್-ಇಲ್ಲಿರುವುದರಿಂದ ನಮಗೆ ಏನು ಪ್ರಯೋಜನ? ಅಙ್ಗು - ಅಲ್ಲಿ, ಉಱೈವಾರ್ಕ್ಕು-ನಿತ್ಯವಾಸಮಾಡುವ ಆ ಸ್ವಾಮಿಗೆ, ತಕ್ಕಿಲಮೇ-ನಾವು ತಕ್ಕವರಲ್ಲವೋ ? ಕೇಳೀರೇ-ಕೇಳಿರಿ.

( ಸ-ಗಾ-ರ ॥ )—

ಯೂಯಂ ಬನ್ಧುಗಣೈಶ್ಚ ಕಾನ್ತಸಹಿತಾಸ್ಸಙ್ಗಾರಶೀಲಾ ದ್ವಿಜಾಃ!
ಶ್ರೀಮೂೞಿಕ್ಕಳನಾಯಕಂ ಪ್ರತಿ ಮಮ ಬ್ರೂತೋಕ್ತಿಮೇತಾಂ ಪರಮ್ ।
ತ್ಯಕ್ತಾ ತೇನ ಚ ಬನ್ಧುಭಿಶ್ಚ ನಿತರಾಂ ಜೀವಾಮಿ ಕಿಂ ಗರ್ಹಿತಾ ?
ಕಿಂ ನಾರ್ಹಾಽಸ್ಮ್ಯಹಮಚ್ಯುತಸ್ಯ ಪರಮಾಂ ಗೋಷ್ಠೀಂ ಪ್ರವೇಷ್ಟುಂ ಚ ತಾಮ್ ॥

ತಾ॥ ನಿಮ್ಮ ಬನ್ಧುಗಳನ್ನು ಬಿಡದೆ, ನಿಮ್ಮ ನಾಯಕಮಣಿಗಳೊಡನೆ ಸೇರಿಕೊಂಡಿರುವ ಪರಸ್ಪರ ಪ್ರೀತಿಯುಳ್ಳ ಕುರುಕುಪಕ್ಷಿಗಳ ಸಮೂಹಗಳೇ! ಸುನ್ದರವಾದ ತಿರುಮೂೞಿಕ್ಕಳದಲ್ಲಿ ವಾಸಮಾಡುವ ಸ್ವಾಮಿಯಿಂದ ಅನಾದರಿಸಲ್ಪಟ್ಟು, ಬನ್ಧುಗಳಿಂದಲೂ ನಿಂದಿಸಲ್ಪಟ್ಟು, ಇಲ್ಲಿ ಇರುವುದರಿಂದ ನಮಗೆ ಏನುಪ್ರಯೋಜನ? ಆ ಸ್ವಾಮಿಗೆ ನಾವು ತಕ್ಕವರಲ್ಲವೋ ? ಕೇಳಿರಿ.

(೩) ತಕ್ಕಿಲಮೇ ಕೇಳೀರ್ಕಳ್ ತಡಮ್ಪುನಲ್ ವಾಯಿರೈ ತೇರುಮ್
ಕೊಕ್ಕಿನಙ್ಗಾಳ್! ಕುರುಕಿನಙ್ಗಾಳ್!
ಕುಳಿರ್ಮೂೞಿಕ್ಕಳತ್ತುಱೈಯುಮ್,
ಶೆಕ್ಕಮಲತ್ತಲರ್ಪೋಲುಮ್ ಕಣ್‌ಕೈಕಾಲ್ ಶೆಙ್ಗನಿವಾಯ್,
ಅಕ್ಕಮಲತ್ತಿಲೈಪೋಲುಮ್ ತಿರುಮೇನಿಯಡಿಕಳುಕ್ಕೇ.

ಪ್ರ|| ತಡವಮ್-ವಿಶಾಲವಾದ, ಪುನಲ್ವಾಯ್-ತಟಾಕದಲ್ಲಿ, ಇರೈತೇರುಮ್-ಆಹಾರವನ್ನು ಹುಡುಕುತ್ತಿರುವ, ಕೊಕ್ಕು ಇನಙ್ಗಾಳ್-ಹಂಸಪಕ್ಷಿಸಮೂಹಗಳೇ! ಕುರುಕು ಇನಙ್ಗಾಳ್ – ಬಕಪಕ್ಷಿಸಮೂಹಗಳೇ !, ಕುೞಿರ್ – ಶ್ರಮಹರವಾದ, ಮೂೞಿಕ್ಕಳತ್ತು-ತಿರುಮೂೞಿಕ್ಕಳದಲ್ಲಿ, ಉಱೈಯುಮ್ – ನಿತ್ಯವಾಸಮಾಡುವ, ಶೆಕ್ಕಮಲತ್ತು-ಕೆಂದಾವರೆಯ, ಅಲರ್ಪೋಲುಮ್-ಹೂವಿನಂತೆ ಇರುವ, ಕಣ್ ಕೈಕಾಲ್-ನೇತ್ರ ಹಸ್ತ ಪಾದಗಳನ್ನೂ, ಶೆವ್ಕನಿವಾಯ್-ಕೆಂಪಾದ ಬಿಮ್ಬಫಲದಂತಿರುವ ವಕ್ತ್ರವನ್ನೂ, ಅಕ್ಕಮಲತ್ತು-ಆ ತಾವರೆಯ, ಇಲೈಪೋಲುಮ್-ಎಲೆಯಂತೆ ಇರುವ, ತಿರುಮೇನಿ ಶರೀರವನ್ನೂ ಉಳ್ಳ, ಅಡಿಕಳುಕ್ಕು-ಸ್ವಾಮಿಯಾದವರಿಗೆ, ತಕ್ಕಿಲಮೇ – ( ಅವರ ಸೌನ್ದರ್ಯಾನುಭವವಂ ಮಾಡಲು ) ನಾವು ಯೋಗ್ಯರಲ್ಲವೋ ?, ಕೇಳೀರ್ಕಳ್-ಕೇಳಿರಿ.

( ಸ-ಗಾ-ರ )—

ಆಹಾರಾನುಗತಾಸ್ತಟಾಕಸಲಿಲೇ ಹಂಸಾ ಬಲಾಕಾಗಣಾಃ !
ಶ್ರೀಮೂೞಿಕ್ಕಳನಾಯಕಸ್ಯ ನಯನಶ್ರೀಪಾಣಿಪಾದಾಮ್ಬುಜಮ್ |
ಅಮ್ಭೋಜಾತಸುಪತ್ರಮೂರ್ತಿಮಪಿ ತಂ ಬಿಮ್ಬಾಧರಂ ಶ್ರೀಪತೇಃ
ಕಿಂ ನಾರ್ಹಾಮ್ಯವಲೋಕಿತುಂ ಚ ರುಚಿರಂ? ಯೂಯನ್ತು ತಂ ಪೃಚ್ಛತ ||

ತಾ|| ವಿಶಾಲವಾದ ತಟಾಕದಲ್ಲಿ ಆಹಾರವನ್ನು ಹುಡುಕುವ ಹಂಸಸಮೂಹಗಳೇ! ಬಕಸಮೂಹಗಳೇ ! ಶ್ರಮಹರವಾದ ತಿರುಮೂೞಿಕ್ಕಳದಲ್ಲಿರುವ ಕಮಲಸದೃಶವಾದ ನೇತ್ರಹಸ್ತಪಾದಗಳುಳ್ಳ ಬಿಂಬಾಧರನಾದ ನೀಲವರ್ಣನಾದ ಸ್ವಾಮಿಗೆ ನಾವು ಅನುರೂಪರಲ್ಲವೋ ಕೇಳಿರಿ. (ಅವನ ಸೌನ್ದರ್ಯವನ್ನು ಅನುಭವಿಸಲು ನಾವು ಯೋಗ್ಯರಲ್ಲವೋ ?)

(೪) ತಿರುಮೇನಿಯಡಿಕಳುಕ್ಕು ತ್ತೀವಿನೈಯೇನ್
ವಿಡುತೂದಾಯ್,
ತಿರುಮೂೞಿಕ್ಕಳಮೆನ್ನುಮ್ ಶೆೞುನಗರ್
ವಾಯಣಿಮುಕಿಲ್ಕಾಳ್,
ತಿರುಮೇನಿಯವಳ್ಕ್ಕರುಳೀರೆನ್ಱಕ್ಕಾಲ್, ಉಮಕ್ಕಿೞುಕ್ಕುಱ್ಱೆನ್
ತಿರುಮೇನಿಯೊಳಿಯಕಱ್ಱಿ ತ್ತೆಳಿವಿಶುಮ್ಬು ಕಡಿಯುಮೇ.

ಪ್ರ॥ ಅಣಿ–ರಮ್ಯವಾದ, ಮುಕಿಲ್‌ಕಾಳ್–ಮೇಘಗಳೇ !, ತಿರುಮೂಳ್ಳಿ ಕ್ಕಳಮೆನ್ನುಮ್–ತಿರುಮೂಳ್ಳಿಕ್ಕಳವೆಂಬ, ಶ್ರೀ–ವಿಲಕ್ಷಣವಾದ, ನಕರ್‌ವಾಯ್– ನಗರದಲ್ಲಿ ವಾಸಮಾಡುವ, ತಿರುಮೇನಿ–ಸರ್ವೇಶ್ವರತ್ವಪ್ರಕಾಶಕವಾದ ದಿವ್ಯವಿಗ್ರ ಹವುಳ್ಳ, ಅಡಿಕಳುಕ್ಕು–ಸ್ವಾಮಿಯಾದವರಿಗೆ, ತೀವಿನೈಯೇ–ಕ್ರೂರವಾದ ಪಾಪ ವುಳ್ಳ ನಾನು, ವಿಡು – ಕಳುಹಿಸುವ, ತೂದಾಯ್ – ದೂತರೂಪಿಗಳಾಗಿ ನೀವು ಹೋಗಿ, ಅವಳ್ಕು–ಅವಳಿಗೆ,ತಿರುಮೇನಿ–ನಿಮ್ಮ ಭೋಗ್ಯವಾದ ದಿವ್ಯಮಙ್ಗಳವಿಗ್ರಹ ವನ್ನು, ಅರುಳೀರ್ – ಕೃಪೆಮಾಡಿರಿ, ಎನ್ನಕ್ಕಾಲ್ – ಎಂದು ಹೇಳಿದರೆ, (ಅದು) ಉಮ್ಮೈ–ನಿಮ್ಮನ್ನು, ತ ತಿರುಮೇನಿ ಒಳಿ – ತನ್ನ ದಿವ್ಯಶರೀರಕಾನ್ತಿಯನ್ನು, ಅಕನ್ಱು–ಬಿಡಿಸಿ, ತೆಳಿವಿಶುಮ್ಬು–ವಿಲಕ್ಷಣವಾದ ಪರಮಾಕಾಶದಲ್ಲಿ (ಪರಮಪದ ದಲ್ಲಿ), ಕಡಿಯುಮೇ–ವಾಸಮಾಡದಂತೆ ಮಾಡುವುದೋ? (ವಾಸಮಾಡುವಂತೆಯೇ ಮಾಡುವುದು–ಎಂದು ಭಾವವು.)

( ಸ–ಗಾ–ರ ॥ )—

ಅಮ್ಭೋದಾ ರುಚಿರಾಸ್ತು ಯೂಯಮಧುನಾ ದೌತ್ಯಂ ವಹನ್ತೋ ಮಮ
ಶ್ರೀಮೂಳ್ಳಿಕ್ಕಳನಾಯಕಂ ಪ್ರತಿ ಗತಾಸ್ತಸ್ಯೈ ತನುರ್ದೀಯತಾಮ್ ।
ಭೋ! ಭೋ! ನಾಥ! ದಯಾಪರೇತಿ ವಚನಂ ಬ್ರೂಥೈವ ಚೇತ್ಕಿಂ ತನೋ–
ಸ್ಸಾನ್ದ್ರ್ಯಶ್ಯಂ ಭವತಾಂ ಹರೇಚ್ಛ ಗಮನಂ ವಿಷ್ಣೋಃ ಪದೇ ವಾರಯೇತ್? ॥

ತಾ॥ ರಮ್ಯವಾದ ಮೇಘಗಳೇ! ತಿರುಮೂಳ್ಳಿಕ್ಕಳವೆಂಬ ದಿವ್ಯನಗರದಲ್ಲಿ ವಾಸಮಾಡುವ ಸರ್ವೇಶ್ವರನಾದ ಸ್ವಾಮಿಗೆ ಪಾಪಿನಿಯಾದ ನನ್ನ ದೂತರಾಗಿ ನೀವು ಹೋಗಿ—"ಅವಳಿಗೆ ನಿಮ್ಮ ಸುನ್ದರವಾದ ದಿವ್ಯಮೂರ್ತಿಯನ್ನು ಅನುಗ್ರಹಿ ಸಿರಿ—" ಎಂದು ಹೇಳಿದರೆ—ಅದರಿಂದ ನಿಮಗೆ ಪರಮಾಕಾಶದಲ್ಲಿ ನಿತ್ಯವಾಸವು ಉಂಟಾಗುವುದು ನಿಶ್ಚಿತ!

(೫೧) ತೆಳಿವಿಶುಮ್ಬುಕಡಿದೋಡಿ ತ್ತೀವೆಳ್ಳಿತ್ತು ಮಿನ್ನಿಲಕುಮ್,
ಒಳಿಮುಕಿಲ್‌ಕಾಳ್ ತಿರುಮೂಳ್ಳಿಕ್ಕಳತ್ತುಱೈಯುಮೊಣ್–
ಶುಡರ್‌ಕ್ಕು,
ತೆಳಿವಿಶುಮ್ಬು ತಿರುನಾಡಾ ತ್ತೀವಿನೈಯೇನ್
ಮನತ್ತುಱೈಯುಮ್,
ತುಳಿವಾರ್‌ಕಳ್ ಕುಳ್ಲಾರ್‌ಕ್ಕೆನ್ ತೂದುರೈತ್ತಲ್
ಶೆಪ್ಪುಮಿನೇ.

ಪ್ರ|| ತೆಳಿವಿಶುಮ್ಬು–ನಿರ್ಮಲವಾದ ಆಕಾಶದಲ್ಲಿ, ಕಡಿದು ಓಡಿ–ತ್ವರೆಯಿಂದ ಓಡಿ, ತೀವಳೈತ್ತು – ಅಗ್ನಿಪರ್ವತದಂತೆ, ಮಿನ್ ಇಲಕುಮ್ – ಮಿಂಚಿನೊಂದಿಗೆ ಪ್ರಕಾಶಿಸುವ, ಒಳಿ – ಶರೀರಕಾನ್ತಿಯುಳ್ಳ, ಮುಕಿಲ್‌ಕಾಳ್ – ಮೇಘಗಳೇ !, ತಿರುಮೂೞಿಕ್ಕಳತ್ತು – ತಿರುಮೂೞಿಕ್ಕಳದಲ್ಲಿ, ಉಱೈಯುಮ್ – ನಿತ್ಯವಾಸ ಮಾಡುವ, ಒಣ್‌ಶುಡರ್‌ಕ್ಕು – ಗುಣಪ್ರಕಾಶವುಳ್ಳ ಸ್ವಾಮಿಗೆ, ತೆಳಿವಿಶುಮ್ಬು – ವಿಮಲವಾದ ದಿವ್ಯಾಕಾಶವನ್ನು, ತಿರುನಾಡು ಆ – ನಿರತಿಶಯವಾದ ಪರಮಪದ ವಾಗಿ ಮಾಡಿ, ತೀವಿನೈಯೇನ್–ಮಹಾಪಾಪವುಳ್ಳ ನನ್ನ, ಮನತ್ತು–ಮನಸ್ಸಿನಲ್ಲಿ, ಉಱೈಯುಮ್ – ಅನ್ತರಂಗವಾಸಮಾಡುತ್ತ, ತುಳಿವಾರ್‌ಕಳ್ – ಸ್ವಲ್ಪಸ್ವಲ್ಪ ವಾಗಿ ಸ್ರವಿಸುವ ಮಧುವುಳ್ಳ, ಕುೞಲಾರ್‌ಕ್ಕು – ಕೇಶಪಾಶವುಳ್ಳ ಸ್ವಾಮಿಗೆ, ಎನ್ ತೂದು ಉರೈತ್ತಲ್ – (ಕೇಶವನೆಂಬ ನಿನ್ನ ನಾಮವು ನಮ್ಮ ಕ್ಲೇಶನಾಶನ ದಿಂದ ಅಲ್ಲವೋ ? – ಎಂದು) ನನ್ನ ಒಂದು ದೂತವಾಕ್ಯವನ್ನು, ಶೆಪ್ಪುಮಿನ್ – ಹೇಳಿರಿ.

( ಸ–ಗಾ–ರ || )—

ಆಕಾಶೇ ತ್ವರಯಾ ಚ ಧಾವನಪರಾ ಅಮ್ಭೋಧರಾ ವೈದ್ಯುತ–
ಜ್ವಾಲಾಭಿಸ್ಸಹಿತಾಸ್ತು ಯೂಯಮಧುನಾ ಮೂೞಿಕ್ಕಳೇಶಂ ಪ್ರತಿ |
ದೌತ್ಯಂ ಮೇ ವಹತೋಕ್ತಿಮೇವ ನಮತ ! ಕ್ಲೇಶಾಪಹಃ ಕೇಶವಃ
ಕಿಂ ಮೇ ನೈವ ದದಾತಿ ದರ್ಶನಮಯಂ ಚಿತ್ತೇ ನಿವಾಸೀ ಮಮ ? ||

ತಾ|| ನಿರ್ಮಲವಾದ ಆಕಾಶದಲ್ಲಿ ತ್ವರೆಯಿಂದ ಓಡಿ ಅಗ್ನಿಪರ್ವತದಂತೆ ಮಿಂಚಿನಿಂದ ಪ್ರಕಾಶಿಸುವ ಮೇಘಗಳೇ ! ತಿರುಮೂೞಿಕ್ಕಳದಲ್ಲಿ ವಾಸಮಾಡುವ ಗುಣೋಜ್ಜ್ವಲನಾದ ಸ್ವಾಮಿಗೆ, ಪರಮಪದವಾಸಿಯಾಗಿದ್ದಾಗ್ಯೂ ಪಾಪಿನಿಯಾದ ನನ್ನ ಮನಸ್ಸಿನಲ್ಲೂ ಅನ್ತರಂಗವಾಸಿಯಾದ ದಿವ್ಯ ಕೇಶಪಾಶವುಳ್ಳ ಸ್ವಾಮಿಗೆ— "ಕೇಶವನೆಂಬ ನಿನ್ನ ನಾಮವು ನಮ್ಮ ಕ್ಲೇಶನಾಶನದಿಂದ ಅಲ್ಲವೇ" ಎಂದು ನನ್ನ ಒಂದು ದೂತವಾಕ್ಯವನ್ನು ನೀವು ಹೇಳಿರಿ.

(೬) ತೂದುರೈತ್ತಲ್ ಶೆಪ್ಪುಮಿನ್‌ಕಳ್ ತೂಮೊೞಿವಾಯ್
ವಣ್ಡಿನಙ್ಗಾಳ್,
ಪೋದಿರೈತ್ತು ಮದು ನುಕರುಮ್ ತೊೞಿಲ್
ಮೂೞಿಕ್ಕಳತ್ತುಱೈಯುಮ್,
ಮಾದರೈ ತ್ತಮ್ಮಾರ್ವಕತ್ತೇ ವೈತ್ತಾರ್‌ಕ್ಕೆನ್
ವಾಯ್‌ಮೊೞಿಯುಮ್,
ತೂದುರೈತ್ತಲ್ ಶೆಪ್ಪದಿರೇಲ್ ಶುಡರ್‌ವಳೈಯುಮ್
ಕಲೈಯುಮೇ.

ಪ್ರ॥ ತೂಮೊೞಿವಾಯ್ – ರಮ್ಯವಾದ ಶಬ್ದಗಳಿಂದ ಮಾತುಗಳನ್ನಾಡುವ, ವಣ್ಡು ಇನಙ್ಗಳ್ – ಭ್ರಮರ ಸಮೂಹಗಳೇ!, ಪೋದು – ಪುಷ್ಪಗುಚ್ಛಗಳಲ್ಲಿ, ಇರೈತ್ತು – ಕೋಲಾಹಲ ಶಬ್ದವಂ ಮಾಡಿ, ಮದು – ಮಧುವನ್ನು, ನುಕರುಮ್ – ಪಾನಮಾಡುವುದಕ್ಕೆ ಅನುಕೂಲವಾದ, ಪೊೞಿಲ್ – ಉದ್ಯಾನವುಳ್ಳ, ಮೂೞಿಕ್ಕಳತ್ತು – ತಿರುಮೂೞಿಕ್ಕಳದಲ್ಲಿ, ಉತ್ತೈಯುಮ್ – ವಾಸಮಾಡುವ, ಮಾದರ್ಕ್ಕೆ – ಶ್ರೀ ದೇವಿಯನ್ನು, ತಮ್ – ತಮ್ಮ, ಮಾರ್ವಕತ್ತೇ – ವಕ್ಷಸ್ಥಳದಲ್ಲಿ ನಿತ್ಯವಾಸಮಾಡುವಂತೆ, ವೈತ್ತಾರ್ಕ್ಕು – ಇಟ್ಟುಕೊಂಡಿರುವ ಸ್ವಾಮಿಗೆ, ಎನ್ವಾಯ್ ಮಾಱ್ಱಮ್ – ನನ್ನ ಬಾಯಿಮಾತುಗಳಾದ, ತೂದು ಉರೈತ್ತಲ್ – ದೂತವಾಕ್ಯವನ್ನು, ಶೆಪ್ಪುದಿರೇಲ್ – ಹೇಳುವಿರಾದರೆ, ಶುಡರ್ – ಪ್ರಕಾಶಮಾನವಾದ, ವಳೈಯುಮ್–ಬಳೆಗಳನ್ನೂ, ಕಲೈಯುಮೇ–ವಸ್ತ್ರಗಳನ್ನೂ ಕುರಿತು, ತೂದು ಉರೈತ್ತಲ್ – ನನ್ನ ಮಾತನ್ನು ದೂತವಾಕ್ಯರೂಪವಾಗಿ ಮಾಡಿಕೊಂಡು,ಶೆಪ್ಪು ವಿರ್ಕಳ್–(ಅವುಗಳು ಶಿಥಿಲವಾಗುತ್ತಿವೆಯೆಂದು) ಹೇಳಿರಿ.

( ಸ–ಗಾ–ರ )—

ಯಾಣಯಂಭೋ! ಮಧುರೋಕ್ತಿಯೋ ಮಧುಕರಾಃ! ಪುಷ್ಪಾವಳೀಶೋಭಿತೇ<br>
ಶ್ರೀಮೂೞಿಕ್ಕಳನಾಮ್ನಿ ತತ್ರ ತು ಪುರೇ ಲಕ್ಷ್ಮ್ಯಾಂ ವರಃ ವಕ್ಷಸಿ।<br>
ಆಸ್ತೇ ಯಸ್ತು ವಿಲೋಕ್ಯ ತಂ ವದತ ಮೇ ದೌತ್ಯಂ ವಹನ್ತಸ್ತ್ವಯಂ<br>
ಶೈಥಿಲ್ಯಂ ಮಮ ಭೂಷಣಾಙ್ಗದ–ದುಕೂಲಾದೀನಿ ಯಾನ್ತೀತ್ಯಹೋ!॥

ತಾ॥ ರಮ್ಯವಾದ ಶಬ್ದಗಳುಳ್ಳ ಭ್ರಮರಸಮೂಹಗಳೇ! ಪುಷ್ಪಗುಚ್ಛಗಳಲ್ಲಿ ಮಧುಪಾನವಂ ಮಾಡಲು ಅನುಕೂಲವಾದ ಉದ್ಯಾನಗಳುಳ್ಳ ತಿರುಮೂೞಿಕ್ಕಳದಲ್ಲಿ ವಾಸಮಾಡುವ ಲಕ್ಷ್ಮೀವಕ್ಷಸ್ಕನಾದ ಸ್ವಾಮಿಗೆ ನನ್ನ ಮಾತುಗಳನ್ನು ನೀವು ದೂತರಾಗಿ ಹೋಗಿ ಹೇಳುವಿರಾದರೆ, ನನ್ನ ಕೈ ಬಳೆಗಳೂ ವಸ್ತ್ರಗಳೂ ಶಿಥಿಲವಾಗುತ್ತಿವೆಯೆಂದು ದೂತವಾಕ್ಯವನ್ನು ಹೇಳಿರಿ.

(೭) ಶುಡರ್ವಳೈಯುಮ್ ಕಲೈಯುಮ್<br>
ಕೊಣ್ಡರುವಿನೈಯೇನ್ ತೋಳ್ತುಱನ್ದ,<br>
ಪಡರ್ಪುಕೞಾನ್ ತಿರುಮೂೞಿಕ್ಕಳತ್ತುಱೈಯುಮ್<br>
ಪಙ್ಗಯಕ್ಕಣ್—<br>
ಶುಡರ್ಪವಳವಾಯನ್ ಕಣ್ಡರುಳಾಯ್ಏರ್<br>
ತೊಯ್ಮಾಱ್ಱಮ್,<br>
ಪಡರ್ಪೊೞಿಲ್ವಾಯ್ ಕ್ಕುರುಕಿನಙ್ಗಳ್ ಎನಕ್ಕೊನ್ಱು<br>
ಪಣಿಯೀರೇ.

ಪ್ರ|| ಪಡರ್–ವಿಸ್ತೀರ್ಣವಾದ, ಪೊೞಿಲ್‌ವಾಯ್ – ಉದ್ಯಾನಗಳಲ್ಲಿರುವ, ಕುರುಕು ಇನಙ್ಗಾಳ್ – ಕುರುಕುಪಕ್ಷಿಸಮೂಹಗಳೇ !, ಶುಡರ್ – ಪ್ರಕಾಶಮಾನವಾದ, ವಳೈಯುಮ್ – ಬಳೆಗಳನ್ನೂ, ಕಲೈಯುಮ್ – ವಸ್ತ್ರಗಳನ್ನೂ, ಕೊಣ್ಡು–ಸ್ವೀಕರಿಸಿ, ಅರುವಿನೈಯೇಱ – ಮಹಾಪಾಪಿಯಾದ ನನ್ನ, ತೋಳ್ – ತೋಳುಗಳನ್ನು, ತುಱನ್ದ – ತಿರಸ್ಕರಿಸಿದ, ಪಡರ್ – ಲೋಕವಿಖ್ಯಾತವಾದ, ಪುಕೞ್ – ಮಹಾಕೀರ್ತಿಯುಳ್ಳ, ತಿರುಮೂೞಿಕ್ಕಳತ್ತು – ತಿರುಮೂೞಿಕ್ಕಳದಲ್ಲಿ, ಉಱೈಯುಮ್ – ನಿತ್ಯವಾಸಮಾಡುವ, ಪಙ್ಗಯಕ್ಕಣ್ – ತಾವರೆಯಂತೆ ಇರುವ ಕಣ್ಣುಗಳುಳ್ಳ, ಶುಡರ್ – ಪ್ರಕಾಶಮಾನವಾದ, ಪವಳವಾಯನೈ–ಹವಳದಂತೆ ಅಧರವುಳ್ಳ ಸ್ವಾಮಿಯನ್ನು, ಕಣ್ಡು–ನೋಡಿ, ಎನಕ್ಕು - ನನಗೋಸ್ಕರ, ಒರುನಾಳ್ – ಒಂದು ದಿನ, ಓರ್ – ಅದ್ವಿತೀಯವಾದ, ತೂಯ್‌ಮಾಱ್ಱಮ್ ಒನ್ಱು – ಶ್ಲಾಘ್ಯವಾದ ಒಂದು ಮಾತನ್ನು, ಪಣಿಯಾರ್ – ಹೇಳಿರಿ.

( ಶ–ಗಾ–ರ || )—

ಉದ್ಯಾನೇಷು ವಿಹಾರಿಣೋ ದ್ವಿಜಗಣಾ ಯೂಯಂ ವಿಲೋಕ್ಯಾಚ್ಯುತಂ
ತಂ ಬ್ರೂತಾದ್ಯ ಗಿರಂ ಮದರ್ಥಮನಘಾಮೇಕಾಂ ಪ್ರವಾಳಾಧರಮ್ |
ಶ್ರೀಮೂೞಿಕ್ಕಳವಾಸಿನಂ ಸುರುಚಿರಾಮ್ಭೋಜಾಮ್ಬಕಂ ಶ್ರೀಧರಂ !
ಕಿಂ ಕೀರ್ತಿಸ್ತವ ಮೇಽಙ್ಗದಂ ಚ ವಸನಂ ಹೃತ್ವಾ ಭುಜೌ ಮುಞ್ಚತಃ ?||

ತಾ|| ವಿಸ್ತೀರ್ಣವಾದ ಉದ್ಯಾನಗಳಲ್ಲಿರುವ ಕುರುಕುಪಕ್ಷಿಸಮೂಹಗಳೇ ! ಪ್ರಕಾಶಮಾನವಾದ ಕೈಬಳೆಗಳನ್ನೂ ವಸ್ತ್ರಗಳನ್ನೂ ಸ್ವೀಕರಿಸಿ ನನ್ನ ತೋಳುಗಳನ್ನು ಬಿಟ್ಟುಹೋದ ಲೋಕವಿಖ್ಯಾತ ಕೀರ್ತಿಯುಳ್ಳ ತಿರುಮೂೞಿಕ್ಕಳವಾಸಿಯಾದ ಪುಣ್ಡರೀಕಾಕ್ಷನಾದ ಪ್ರವಾಳವಕ್ತ್ರನಾದ ಸ್ವಾಮಿಯನ್ನು ಕಣ್ಡು ನನಗೋಸ್ಕರ ಒಂದು ದಿನ ಶ್ಲಾಘ್ಯವಾದ ಒಂದು ಮಾತನ್ನು ಹೇಳಿರಿ.

(೮) ಎನಕ್ಕೊನ್ಱು ಪಣಿಯಿರ್‌ಕಳಿರುಮ್ಪೊೞಿಲ್ ವಾಯಿರೈ ತೇರ್‌ನ್ದು,
ಮನಕ್ಕಿನ್ಬಮ್ ಪಡಮೇವುಮ್ ವಣ್ಡಿನಙ್ಗಾಳ್ ತುಮ್ಬಿಕಾಳ್,
ಕನಕ್ಕೊಳ್ ತಿಣ್‌ಮದಿಳ್ ಪುಡೈಶೂೞ್
ತಿರುಮೂೞಿಕ್ಕಳತ್ತುಱೈಯುಮ್,
ಪುನಕ್ಕೊಳ್ ಕಾಯಾಮೇನಿ ಪೂನ್ತುೞಾಯ್
ಮುಡಿಯಾರ್‌ಕ್ಕೇ.

ಪ್ರ || ಇರುಮ್ - ವಿಶಾಲವಾದ, ಪೊೞಿಲ್‌ವಾಯ್ - ಉದ್ಯಾನದಲ್ಲಿ, ಇರೈತೇರ್‌ನ್ದು - ಆಹಾರವನ್ನು ಹುಡುಕಿ, ಮನಕ್ಕು-ಮನಸ್ಸಿಗೆ, ಇನ್ಬಮ್‌ಪಡ-ಭೋಗ್ಯವಾಗುವಂತೆ, ಮೇವುಮ್-ಪರಸ್ಪರ ಸೇರಿಕೊಂಡಿರುವ, ವಣ್ಡಿನಙ್ಗಳ್-ಭ್ರಮರ ಸಮೂಹಗಳೇ !, ತುಮ್ಬಿಕಾಳ್ - ದುಂಬಿಗಳೇ !, ಕನಕ್ಕೊಳ್ - ಘನವಾದ, ತಿಣ್ - ದೃಢವಾದ, ಮದಿಳ್-ಪ್ರಾಕಾರಗಳಿಂದ, ಪುಡೈಶೂೞ್-ಸುತ್ತಲೂ ಆವೃತವಾದ, ತಿರುಮೂೞಿಕ್ಕಳತ್ತು - ತಿರುಮೂೞಿಕ್ಕಳದಲ್ಲಿ, ಉತ್ತೈಯುಮ್ - ನಿತ್ಯವಾಸಮಾಡುವ, ಪುನಮ್‌ಕೊಳ್ - ತನ್ನ ಸ್ಥಲದಲ್ಲಿ ಬೆಳೆದಿರುವ, ಕಾಯಾಮೇನಿ - ಅತಸೀಕುಸುಮದಂತೆ ಶರೀರಕಾನ್ತಿಯುಳ್ಳ, ಪೂಮ್‌ತುೞಾಯ್‌ಮುಡಿಯಾರ್ಕ್ಕೇ - ರಮ್ಯವಾದ ತುಳಸೀಮಾಲೆಯಿಂದ ಅಲಂಕೃತವಾದ ಶಿರಸ್ಸುಳ್ಳ ಸ್ವಾಮಿಗೆ, ಎನಕ್ಕು - ನನಗೋಸ್ಕರ, ಒನ್ರುಪಣಿಯೀರ್ - ಒಂದು ಮಾತನ್ನು ಹೇಳಿರಿ.

( ಸ-ಗಾ-ರ || )—

ಭೃಙ್ಗೀಭೃಙ್ಗಗಣಾಶ್ಚ ಯೂಯಮಧುನೋದ್ಯಾನೇಷು ಸಂಶ್ಲೇಷಿಣಃ
ಪ್ರೀತ್ಯಾ ಹನ್ತ ! ಮಿಥಃ ಪುರೇ ದೃಢತಮಪ್ರಾಕಾರಮಾಲಾವೃತೇ |
ಶ್ರೀಮೂೞಿಕ್ಕಳನಾಮ್ನಿ ವಾಸಿನಮಮುಂ ಮೂರ್ತ್ಯಾಽತಸೀಶ್ಯಾಮಳಂ
ದೃಷ್ಟ್ವಾತ್ರ ಶ್ರೀತುಳಸೀಲಸನ್ಮಕುಟಮಸ್ಯೇಶಾಂ ಗಿರಂ ಬ್ರೂತ ಮೇ ||

ತಾ || ವಿಶಾಲವಾದ ಉದ್ಯಾನದಲ್ಲಿ ಆಹಾರವನ್ನು ಹುಡುಕಿ ಮನಸ್ಸಿಗೆ ಭೋಗ್ಯವಾಗುವಂತೆ ಪರಸ್ಪರಸೇರಿಕೊಂಡಿರುವ ಭೃಙ್ಗೀಭೃಙ್ಗಗಣಗಳೇ ! ದೃಢಪ್ರಾಕಾರಪರಿವೃತವಾದ ತಿರುಮೂೞಿಕ್ಕಳದಲ್ಲಿ ನಿತ್ಯವಾಸಮಾಡುವ ಅತಸೀಕುಸುಮಗಾತ್ರನಾದ ದಿವ್ಯತುಲಸೀಮಾಲಾಲಂಕೃತ ಶಿರಸ್ಕನಾದ ಸ್ವಾಮಿಗೆ ನನಗೋಸ್ಕರ ಒಂದುಮಾತನ್ನು ಹೇಳಿರಿ.

(೯) ಪೂನ್ತುೞಾಯ್‌ಮುಡಿಯಾರ್ಕ್ಕು ಪ್ಪೊನ್ನಾೞಿಕ್ಕೈ-
ಯಾರುಕ್ಕು,
ಏನ್ದು ನೀರಿಳವಾ ಕುರುಕೇ! ತಿರುಮೂೞಿಕ್ಕಳತ್ತಾರುಕ್ಕು,
ಏನ್ದುಪೂಣ್ ಮುಲೈಪಯನ್ದೆನ್ನಿಣೈಮಲರ್ ಕಣ್ಣೀರ್
ತದುಮ್ಬ,
ತಾನ್ತುಮ್ಸ್ಸ ಕ್ಕೊಣ್ಡುಕಲ್‌ತಲೈ ತಕವನ್ನೆನ್ರುರೈಯೀರೇ

ಪ್ರ॥ ನೀರ್ ಏನ್ಱು–ಜಲದಲ್ಲಿ ತೇಲಾಡುವ, ಇಳವರ್–ಯೌವನದಲ್ಲಿರುವ, ಕುರುಕೇ–ಕುರುಕುಪಕ್ಷಿಯೇ!, ಪೊನ್ತುೞಾಯ್ ಮುಡಿಯಾರ್‌ಕ್ಕು – ರಮ್ಯವಾದ ತುಳಸೀಮಾಲೆಯಿಂದ ಅಲಂಕೃತವಾದ ಶಿರಸ್ಸುಳ್ಳ ಸ್ವಾಮಿಗೆ, ಪೊನ್ನಾೞಿ ಕೈಯಾರುಕ್ಕು–ಸ್ವರ್ಣಮಯವಾದ ಚಕ್ರವನ್ನು ಹಸ್ತದಲ್ಲಿ ಧರಿಸಿ ಇರುವವರಿಗೆ, ಪೂಣ್–(ಹಾರರೂಪವಾದ) ಆಭರಣವನ್ನು, ಏನ್ಱು–ಧರಿಸಿರುವ, ಮುಲೈ–ಸ್ತನಗಳು, ಪಯನ್ಱು–ವೈವರ್ಣ್ಯವನ್ನು ಹೊಂದಿ, ಎನ–ನನ್ನ, ಮಲರ್ ಇಣೈ ಕಣ್–ವಿಕಸಿತವಾದ ಎರಡು ಕಣ್ಣುಗಳೂ, ನೀರ್‌ತದುಮ್ಬ – ಶೋಕಾಶ್ರು ಪೂರಿತವಾಗುವಂತೆ, ತಾಮ್–ತಾವೇ, ತಮ್ಮೈಕ್ಕೊಣ್ಡು–ತಮ್ಮ ಸ್ವರೂಪವನ್ನು ತಿಳಿದು ಇದ್ದಾಗ್ಯೂ, ಅಕಲ್‌ತಲ್–ನನ್ನನ್ನು ಬಿಟ್ಟು ಹೋಗುವುದು, ತಕವು ಅನ್ಱೆನ್ಱು–(ತಮ್ಮ ದಯೆಗೆ) ಅನುರೂಪವಲ್ಲವೆಂದು, ಉರೈಯೀರ್–ಹೇಳಿರಿ.

( ಸ–ಗಾ–ರ ॥ )—

ಯೂಯಂ ಪಕ್ಷಿಗಣಾ ಜಲೋಪರಿಚರಾ ದೃಷ್ಟ್ವಾ ಹರಿಂ ಶ್ರೀಧರಂ
ಶ್ರೀಮೂೞಿಕ್ಕಳವಾಸಿನಂ ವದತ ಮೇ ಶ್ರೀ ಚಕ್ರಪಾಣಿಂ ಪ್ರಿಯಮ್ ।
ವೈವರ್ಣ್ಯಂ ವಹತೀಹ ಮೇ ಸ್ತನಯುಗಂ ಪೂರ್ವಸ್ತು ಭೂಷಾಧರಂ !
ನೇತ್ರಾಬ್ಜದ್ವಯಮಶ್ರುಪೂರಿತಮಹೋ! ತ್ಯಾಗೋಽದ್ಯ ಮೇ ನೋಚಿತಃ ॥

ತಾ॥ ಜಲದಲ್ಲಿ ತೇಲಾಡುವ ಯೌವನಶಾಲಿಯಾದ ಕುರುಕುಪಕ್ಷಿಯೇ! ರಮ್ಯತುಲಸೀಮಾಲಾಲಂಕೃತ ಶಿರಸ್ಕನಾದ ಸ್ವರ್ಣಮಯ ಚಕ್ರಧರನಾದ ಸ್ವಾಮಿಗೆ—ನನ್ನ ಹಾರಾಲಂಕೃತವಾದ ಸ್ತನಗಳು ವೈವರ್ಣ್ಯವನ್ನು ಹೊಂದಿ ನನ್ನ ಎರಡು ಕಣ್ಣುಗಳೂ ಶೋಕಬಾಷ್ಪಭರಿತವಾಗುವಂತೆ ನೀವು ತಮ್ಮ ಸ್ವರೂಪವನ್ನು ತಿಳಿದು ಇದ್ದಾಗ್ಯೂ ನನ್ನನ್ನು ಬಿಟ್ಟುಹೋಗುವುದು ಅನುಚಿತವೆಂದು ಹೇಳಿರಿ.

(೧೦) ತಕವನ್ಱೆನ್ಱುರೈಯೀರ್‌ಕಳ್ ತಡಮ್ಪುನಲ್ ವಾಯಿರೈತೇರ್‌ನ್ದು,
ಮಿಕವಿನ್ಬಮ್ ಪಡಮೇವುಮ್ ಮೆನ್ನಡೈಯವನ್ನಙ್ಗಾಳ್,
ಮಿಕಮೇನಿ ಮೆಲಿವೆಯ್‌ದಿ ಮೇಕಲೈಯುಮೀೞ್ನ್ದೆನ್ಱು, ಎನ
ಅಕಮೇನಿ ಯೊೞಿಯಾಮೇ ತಿರುಮೂೞಿಕ್ಕಳತ್ತಾರ್‌ಕ್ಕೇ.

ಪ್ರ॥ ತಡಮ್–ವಿಶಾಲವಾದ, ಪುನಲ್‌ವಾಯ್–ಜಲಪ್ರದೇಶಗಳಲ್ಲಿ, ಇರೈ–ಆಹಾರವನ್ನು, ತೇರ್‌ನ್ದು–ಸಂಪಾದಿಸಿ, ಮಿಕ ಇನ್ಬಮ್–ಪರಮಾನನ್ದವು, ಪಡ–ಉಂಟಾಗುವಂತೆ, ಮೇವುಮ್–ಪರಸ್ಪರ ಸೇರಿಕೊಂಡಿರುವ, ಮೆನ್‌ನಡೈಯ–

ಮನ್ದಗಮನವುಳ್ಳ, ಅನ್ನಙ್ಗಳ್–ಹಂಸಪಕ್ಷಿಗಳೇ!, ಮೇನಿ–ಶರೀರವು, ಮಿಕ–ಅಧಿಕವಾಗಿ, ಮೆಲಿವು ಎಯ್ದಿ – ಕೃಶತ್ವವನ್ನು ಹೊಂದಿ, ಮೇಕಲೈಯುಮ್–ಒಡ್ಯಾಣವೂ, ಊಡು ಅಱೈನ್ದು–ವಸ್ತ್ರಬನ್ಧವು ಶಿಥಿಲವಾಗುವಂತೆ ಸಡಿಲವಾಗಿ, ಎನ್ ಅಕಮೇನಿ–ನನ್ನ ಅನ್ತರಂಗ ಸ್ವರೂಪವೂ, ಒೞಿಯಾಮೇ–ಶಿಥಿಲವಾಗದಂತೆ, ತಿರುಮೂೞಿಕ್ಕಳತ್ತಾರ್ಕ್ಕು–ತಿರುಮೂೞಿಕ್ಕಳದಲ್ಲಿ ನಿಂತಿರುವ ಸ್ವಾಮಿಗೆ, ತಕವು ಅನ್ಱೆನ್ಱು–ಇದು ಯುಕ್ತವಲ್ಲವೆಂದು, ಉರೈಯೀರ್ಕಳ್–ಹೇಳಿರಿ.

( ಸ–ಗಾ–ರ || )—

ಯೂಯಂ ಹಂಸಗಣಾಃಸ್ಥ ಮನ್ದಗಮನಾ ಆಹಾರಮನ್ವಿಷ್ಯ ಸಂ-
ಶ್ಲೇಷಾನನ್ದಯುತಾ ನದೀಪರಿಸರೇ ತಂ ಮೇ ವಿಲೋಕ್ಯ ಪ್ರಿಯಮ್ |
ಶ್ರೀಮೂೞಿಕ್ಕಳನಾಯಕಂ ವದತ! ತೇ ಯುಕ್ತಂ ನ ಹೀದಂ ತ್ವಿತಿ
ಕ್ಷಿಪ್ರಂ ಜೀವಿತಕಾಲ ಏವ ಮಮ ಯತ್ ಕಾಙ್ಕ್ಷೀ ಭವೇತ್ ಪ್ರಚ್ಯುತಾ||

ತಾ|| ವಿಶಾಲವಾದ ಜಲಪ್ರದೇಶಗಳಲ್ಲಿ ಆಹಾರವನ್ನು ಸಂಪಾದಿಸಿ ಪರಮಾನನ್ದವುಂಟಾಗುವಂತೆ ಪರಸ್ಪರ ಸೇರಿಕೊಂಡಿರುವ ಮನ್ದಗಮನವುಳ್ಳ ಹಂಸಪಕ್ಷಿಗಳೇ! ನನ್ನ ಶರೀರವು ಕೃಶವಾಗಿ ಒಡ್ಯಾಣವೂ ಶಿಥಿಲವಾಗಿ ನನ್ನ ಅನ್ತರಂಗವು ಮಾತ್ರ ಶಿಥಿಲವಾಗದಂತೆ ತಿರುಮೂೞಿಕ್ಕಳದಲ್ಲಿ ನಿಂತಿರುವ ಸ್ವಾಮಿಗೆ ಇದು ಯುಕ್ತವಲ್ಲವೆಂದು ಹೇಳಿರಿ.

(೧೧) ಒೞಿವಿನ್ಱಿ ತ್ತಿರುಮೂೞಿಕ್ಕಳತ್ತುಱೈಯುಮೊಣ್ಶುಡರೈ,
ಒೞಿವಿಲ್ಲಾ ವಣಿಮೞಲೈ ಕ್ಕಿಳಿಮೊೞಿಯಾಳಲಱ್ಱಿಯ
ಶೊಲ್,
ವೞುವಿಲ್ಲಾ ವಣ್ಕುರುಕೂರ್ ಚ್ಚಡಕೋಪನ್
ವಾಯ್ನ್ದುರೈತ್ತ,
ಅೞುವಿಲ್ಲಾ ವಾಯಿರತ್ತಿಪ್ಪತ್ತುಮ್ ನೋಯಱುಕ್ಕುಮೇ.

ಪ್ರ|| ಒೞಿವು ಇನ್ಱಿ–ಅವಿಚ್ಛಿನ್ನವಾಗಿ, ತಿರುಮೂೞಿಕ್ಕಳತ್ತು – ತಿರುಮೂೞಿಕ್ಕಳದಲ್ಲಿ, ಉಱೈಯುಮ್ – ವಾಸಮಾಡುವ, ಒಣ್ ಶುಡರೈ – ದಿವ್ಯತೇಜೋನಿಧಿಯನ್ನು, ಒೞಿವಿಲ್ಲಾ–ವಿರಹವನ್ನು ಸಹಿಸದೆ ಇರುವ, ಅಣಿ–ರಮಣೀಯವಾದ, ಮೞಲೈ–ಮುಗ್ಧಭಾಷಿತಗಳುಳ್ಳ, ಕಿಳಿಮೊೞಿಯಾಳ್–ಗಿಣಿಯಂತೆ ಮಾತನಾಡುವ ನಾಯಕಿಯು, ಅಲಱ್ಱಿಯ–ಅಕ್ರಮವಾಗಿ ವಿರಹಾರ್ತಿಯಿಂದ ಹೇಳುವ, ಶೊಲ್–

ಉಕ್ತಿಯನ್ನು, ವ್ಳುವಿಲ್ಲಾ-ಪ್ರೇಮದಲ್ಲಿ ನ್ಯೂನತೆಯಿಲ್ಲದ, ವಣ್‌ಕುರುಕೂರ್-ದಿವ್ಯವಾದ ಕುರುಕಾಪುರಿಯ, ಶಡಕೋಪ್ಪನ್ - ಶಠಾರಿಮುನಿಯು, ವಾಯ್‌ನ್ದು ಉರೈತ್ತ-ಅನುರೂಪವಾಗಿ ಹೇಳಿರಚಿಸಿದ, ಅೞಿವಿಲ್ಲಾ-ಎಂದಿಗೂ ಮರೆಯಲಾಗದ (ನಿತ್ಯವಾದ), ಆಯಿರತ್ತು-ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವು, ನೋಯ್ ಅಱುಕ್ಕುಮೇ-ಸಂಸಾರ ವ್ಯಾಧಿನಾಶಕವಾಗುವುದಷ್ಟೆ! (ಇದು ಸತ್ಯವೆಂದು ಭಾವವು.)

( ಸ-ಗಾ-ರ )—

ಶ್ರೀಮೂೞಿಕ್ಕಳವಾಸಿನಂ ಪ್ರತಿ ಹರಿಂ ತೇಜಃ ಪರಂ ಶ್ರೀಧರಂ
ಮುಗ್ಧೋಕ್ತ್ಯಾ ಶುಕಭಾಷಿತಾ ತು ರಮಣೀ ಕಾನ್ತಾ ಯಥಾ ಭಾಷಯೇತ್ |
ಪ್ರೀತ್ಯಾ ಶ್ರೀಕುರುಕಾಪುರಪ್ರಭುರಸೌ ಶ್ರೀಸೂಕ್ತಿಸಾಹಸ್ರಕೇ
ಪದ್ಯಾನಾಂ ದಶಕಂ ತಥೇದಮವದತ್ ಸಂಸಾರರೋಗಾಪಹಮ್ ||

ತಾ|| ಅವಿಚ್ಛಿನ್ನವಾಗಿ ತಿರುಮೂೞಿಕ್ಕಳದಲ್ಲಿ ವಾಸಮಾಡುವ ದಿವ್ಯತೇಜೋನಿಧಿಯಾದ ಸ್ವಾಮಿಯನ್ನು ರಮಣೀಯಮುಗ್ಧಭಾಷಿತಗಳುಳ್ಳ ಗಿಣಿಯಂತೆ ಮಾತನಾಡುವ ನಾಯಕಿಯು ಅಕ್ರಮವಾಗಿ ವಿರಹಾರ್ತಿಯಿಂದ ಹೇಳುವ ಉಕ್ತಿಯನ್ನು ಪ್ರೇಮಾತಿಶಯವುಳ್ಳ ಕುರುಕಾಪುರಿಯ ಶಠಾರಿಮುನಿಯು ಅನುರೂಪವಾಗಿ ಹೇಳಿ ರಚಿಸಿದ ಅವಿಸ್ಮರಣೀಯವಾದ ಸಹಸ್ರ ಪದ್ಯಮಾಲೆಯೊಳು ಈ ದಶಕವು ಸಂಸಾರ ವ್ಯಾಧಿನಾಶಕವಾಗುವುದೆಂಬುದು ಸತ್ಯ।

( ದ್ರ-ಉ-ಸಂ || )—

ಸ್ವೀಯಂ ವಿಯೋಗಿಜನಹನ್ತ್ರ ನಿಜಾಭಿರೂಪ್ಯಂ
ವಿಸ್ಮೃತ್ಯ ಸಂಶ್ರಿತಜನೈರ್ವಸತಸ್ಸಹೈವ |
ಅರ್ಚಾ ಹರೇಃ ಕ್ವಚನ ತತ್ಪ್ರತಿಬೋಧನಾಯ
ದೂತೀ ಚಕಾರ ವಿಹಗಾನಧಿಸಪ್ತಮಂ ಸಃ ||

( ದ್ರ-ಉ-ತಾ-ರ || )—

ರಮ್ಯತ್ವಾಚ್ಛ್ರೀತುಲಸ್ಯಾಶ್ರಿತಜನಸಹಿತತ್ವೇನ ಪದ್ಮಾಕ್ಷತಾಯಾಃ
ಸ್ವಾಮಿತ್ವಾತ್ ಸತ್ಪರಂ ಜ್ಯೋತಿರಿತಿ ಕಥನತಶ್ಶ್ರೀಧರತ್ವಾತಿಕೀರ್ತ್ಯಾ |
ಪುಷ್ಪಶ್ಯಾಮತ್ವಭೂಮ್ನಾ ರಥಚರಣಮುಖಸ್ವಾಯುಧತ್ವಾದ್ಯುದನ್ತೈಃ
ಶೌರೇರ್ಧೀರ್ಮಾ ಶಠಾರಿರ್ಘಟಕಮುಖಸುವಿಸ್ರಮ್ಭಣೀಯತ್ವಮಾಹ ||

(ಈ ಸಪ್ತಮದಶಕದ ಸಾರಾಂಶ—)

ಈ ಏಳನೆಯದಶಕದಲ್ಲಿ — ಶ್ರೀ ಶಠಾರಿಮುನಿಯು ನಾಯಿಕಾವಸ್ಥೆಯಂ ಹೊಂದಿ ತಿರುಮೂೞಿಕ್ಕಳದ ಸ್ವಾಮಿಯನ್ನು ಕುರಿತು ಅತ್ಯನ್ತ ವ್ಯಾಮೋಹವಂ ಪಡೆದು, ಪಕ್ಷಿಸಮೂಹಾದಿಗಳನ್ನು ದೂತಕೃತ್ಯದಲ್ಲಿ ಪ್ರೇರಿಸುತ್ತ-ನಾರೈಪಕ್ಷಿಗಳನ್ನೂ ಕುರುಕುಪಕ್ಷಿಗಳನ್ನೂ ಹಂಸಪಕ್ಷಿಗಳನ್ನೂ ಬಕಸಮೂಹಗಳನ್ನೂ ಮೇಘಸಮೂಹಗಳನ್ನೂ ಭ್ರಮರಸಂಘಗಳನ್ನೂ ಭೃಙ್ಗೀಭೃಙ್ಗಗಣಗಳನ್ನೂ ಕ್ರಮೇಣ ಸಂಬೋಧಿಸಿ—"ನನ್ನ ಈ ದುರ್ದಶೆಯನ್ನು ನನ್ನ ನಾಯಕನಿಗೆ ತಿಳಿಸಿ, ಹೀಗೆ ನನ್ನನ್ನು ಬಿಟ್ಟುಹೋಗುವುದು ನಿಮಗೆ ಉಚಿತವಲ್ಲ"—ಎಂದು ಹೇಳಿ ಎಂದು ದೂತವಾಕ್ಯಗಳನ್ನು ಹೇಳಿ ಕಳುಹಿಸಿ ತಮ್ಮ ಭಗವತ್ಪ್ರೇಮಾತಿಶಯವನ್ನು ವರ್ಣಿಸಿ ಇರುತ್ತಾರೆ.

—:❖:—

ಶ್ರೀಃ

## ನವಮಶತಕದಲ್ಲಿ—ಅಷ್ಟಮದಶಕ.

(ಅಱುಕ್ಕುಮ್‌ವಿನೈ—)

(ಈ ದಶಕದಲ್ಲಿ— ಶ್ರೀ ಶಠಾರಿಮುನಿವರ್ಯರು ಮಲೈಯಾಳದೇಶದಲ್ಲಿರುವ ತಿರುನಾವಾಯ್ ಎಂಬ ದಿವ್ಯಕ್ಷೇತ್ರದ ಸ್ವಾಮಿಯ ವಿಷಯದಲ್ಲಿ ಅತ್ಯನ್ತ ಪ್ರೇಮಾವಿಷ್ಟರಾಗಿ ತದ್ದರ್ಶನ-ಭಜನ-ಕೈಙ್ಕರ್ಯಾದಿಗಳನ್ನೇ ಅಪೇಕ್ಷಿಸುತ್ತಾರೆ.)

---

(೧) ಅಱುಕ್ಕುಮ್ ವಿನೈಯಾಯಿನ ಆಕತ್ತವನೈ
ನಿಱುತ್ತುಮ್ ಮನತ್ತೊನ್ಱಿಯ ಶಿನ್ದೈಯಿನಾರ್ಕ್ಕು,
ವೆಱಿತ್ತಣ್ ಮಲರ್‌ಚೋಲೈಕಳ್‌ಶೂೞ್ ತಿರುನಾವಾಯ್
ಕುಱುಕ್ಕುಮ್ ವಕೈಯುಣ್ಡುಕೊಲೋ ಕೊಡಿಯೇಱ್ಕೇ.

ಪ್ರ॥ ಆಕತ್ತು - ತಮ್ಮ ಮನಸ್ಸಿನಲ್ಲಿ, ಅವನೈ - ಆ ಸರ್ವೇಶ್ವರನನ್ನು, ನಿಱುತ್ತುಮ್ - ನಿಲ್ಲಿಸಬೇಕೆಂಬ, ಮನತ್ತು - ಮನಸ್ಸಿನಲ್ಲಿ, ಒನ್ಱಿಯ - ದೃಢಪಡಿಸಲ್ಪಟ್ಟ, ಶಿನ್ದೈಯಿನಾರ್ಕ್ಕು-ಸಂಕಲ್ಪವುಳ್ಳವರಿಗೆ, ವಿನೈಯಾಯಿನ-ಅವಿದ್ಯಾ

ಕರ್ಮವಾಸನಾರುಚಿಗಳೆಂಬ ವಿರೋಧಿಗಳನ್ನು, ಅಱುಕ್ಕುಮ್ - ನಾಶಪಡಿಸುವ, ವೆಱಿ-ಪರಿಮಳವುಳ್ಳ, ತಣ್-ಶೀತಳವಾದ, ಮಲರ್-ಪುಷ್ಪಗಳಿಂದ ಭರಿತವಾದ, ಶೋಲೈಕಳ್‌ಶೂழ் - ಉದ್ಯಾನಗಳಿಂದ ಪರಿವೃತವಾದ, ತಿರುನಾವಾಯ್ - ತಿರುನಾವಾಯ್ ಎಂಬ ಕ್ಷೇತ್ರವು, ಕೊಡಿಯೇತ್ಕ್ಕೇ-ಕ್ರೂರಸ್ವಭಾವವುಳ್ಳ ನನಗೆ, ಕುಱುಕ್ಕುಮ್ ವಕೈ ಉಣ್ಡುಕೊಲೋ-ಸಮೀಪಿಸುವ ಮಾರ್ಗವುಂಟೋ ?

( ಸ-ಗಾ-ರ )—

ಚಿತ್ತೇ ನಿವೇಶಯಿತುಮಚ್ಯುತಮುತ್ಸುಕಾನಾಂ
ಸರ್ವಾಘಹಾರಿ ಚ ಸುಗನ್ಧಿವನಾಭಿರಾಮಮ್ |
ಶ್ರೀಶಸ್ಯ ಭೋಗ್ಯಮುಚಿತಂ ಕಥಮಸ್ತಿ ಸೇವ್ಯಂ
ನಾವಾಯ್‌ಪುರಂ ಶುಭತಮಂ ಮಮ ಪಾಪಭಾಜಃ ? ||

ತಾ|| ಸರ್ವೇಶ್ವರನನ್ನು ಹೃದಯದಲ್ಲಿ ಇಡಬೇಕೆಂದು ದೃಢಸಂಕಲ್ಪವುಳ್ಳವರಿಗೆ ವಿರೋಧಿನಾಶಕವಾದ ದಿವ್ಯಗಂಧಭರಿತಪುಷ್ಪೋದ್ಯಾನಪರಿವೃತವಾದ ತಿರುನಾವಾಯ್‌ಕ್ಷೇತ್ರವು ಮಹಾಪಾಪಿಯಾದ ನನಗೆ ಸಮೀಪಿಸುವ ಮಾರ್ಗವು ಉಂಟೋ?

(೨) ಕೊಡಿಯೇರಿಡೈಕ್ಕೋಕನಕತ್ತವಳ್ ಕೇಳ್ವನ್
ವಡಿವೇಲ್ ತಡಙ್ಕಣ್ ಮಡಪ್ಪಿನ್ನೈ ಮಣಾಳನ್,
ನೆಡಿಯಾನುಱೈ ಶೋಲೈಕಳ್‌ಶೂழ் ತಿರುನಾವಾಯ್,
ಅಡಿಯೇನಣುಕಪ್ಪೆಱುನಾಳ್ ಎವೈಕೊಲೋ.

ಪ್ರ|| ಕೊಡಿ ಏರಿಡೈ-ಲತೆಯಂತೆ ರಮ್ಯವಾದ ಮಧ್ಯಪ್ರದೇಶವುಳ್ಳ, ಕೋಕನಕತ್ತವಳ್ - ತಾವರೆಹೂವಿನಲ್ಲಿ ಹುಟ್ಟಿ ಅತ್ಯಂತಭೋಗ್ಯೆಯಾದ ಲಕ್ಷ್ಮೀದೇವಿಗೆ, ಕೇಳ್ವನ್-ನಾಯಕನಾದ, ವಡಿವೇಲ್ - ತೀಕ್ಷ್ಣವಾದ ವೇಲಾಯುಧದಂತೆ ಪ್ರಕಾಶಿಸುವ, ತಡಮ್‌ಕಣ್ - ವಿಶಾಲವಾದ ನೇತ್ರಗಳುಳ್ಳ, ಮಡಪ್ಪಿನ್ನೈ - ಯೌವನಭೂಷಿತೆಯಾದ ನಪ್ಪಿನ್ನೈಯೆಂಬ ನೀಳಾದೇವಿಗೆ, ಮಣಾಳನ್-ಪ್ರಿಯವಲ್ಲಭನಾದ, ನೆಡಿಯಾನ್-ಅಪರಿಚ್ಛಿನ್ನಭೋಗ್ಯತಾತಿಶಯವುಳ್ಳ ಸ್ವಾಮಿಯು, ಉಱೈ-ನಿತ್ಯವಾಸಮಾಡುವ, ಶೋಲೈಕಳ್‌ಶೂழ்-ಉದ್ಯಾನಗಳಿಂದ ಪರಿವೃತವಾದ, ತಿರುನಾವಾಯ್-ತಿರುನಾವಾಯ್ ಕ್ಷೇತ್ರವನ್ನು, ಅಡಿಯೇನ್ - ದಾಸಭೂತನಾದ ನಾನು, ಅಣುಕಪ್ಪೆಱುಮ್‌ನಾಳ್-ಹೊಂದಬಹುದಾದ ದಿನಗಳು, ಎವೈಕೊಲೋ-ಯಾವುವೋ !

( ಸ-ಗಾ-ರ ॥ )—

ಯಸ್ಯ ಪ್ರಿಯಾ ತನುಕಟಿಃ ಕಮಲೋದ್ಭವಾ ಶ್ರೀ-
ರ್ಯಸ್ಯ ಪ್ರಿಯಾಽಬ್ಜನಯನಾ ತರುಣೀ ಚ ನೀಳಾ |
ಸರ್ವೇಶ್ವರಸ್ಯ ಸತತಂ ಕಿಲ ತಸ್ಯ ಭೋಗ್ಯಂ
ನಾವಾಯ್‌ಪುರಂ ಮಮ ಕದಾ ಭವತೀಹ ಸೇವ್ಯಮ್ ? ||

ತಾ|| ಸೂಕ್ಷ್ಮಮಧ್ಯವುಳ್ಳ ಪದ್ಮೋದ್ಭವೆಯಾದ ಲಕ್ಷ್ಮೀದೇವಿಗೆ ನಾಯಕನಾಗಿಯೂ, ವಿಶಾಲನೇತ್ರೆಯಾದ ನವಯೌವನಭೂಷಿತೆಯಾದ ನೀಳಾದೇವಿಗೆ ಪ್ರಿಯವಲ್ಲಭನಾಗಿಯೂ ಇರುವ ಸರ್ವೇಶ್ವರನು ನಿತ್ಯವಾಸಮಾಡುವ ತಿರುನಾವಾಯ್ ಕ್ಷೇತ್ರವನ್ನು ನಾನು ಹೊಂದಬಹುದಾದ ದಿನಗಳು ಯಾವುವೋ ?

(೩) ಎನ್ರೈಕೊಲಣುಕಪ್ಪೆಱುನಾಳ್ ಎನ್ರೆಪ್ಪೋದುಮ್
ಕನ್ರೈಯಿಲ್ ಮನಮಿನ್ರಿ ಕಣ್ಣೀರ್‌ಕಳ್ ಕಲುೞ್ವನ್
ನನ್ರೈಯಿಲ್ ತಿರುನಾರಣನ್ ಶೇರ್ ತಿರುನಾವಾಯ್
ಅನ್ರೈಯುಳ್ ಪುಕಲಾವದೋರ್ ನಾಳಱಿಯೇನೇ.

ಪ್ರ|| ಅಣುಕಪ್ಪೆಱುನಾಳ್-ಆಶ್ರಯಿಸಬಹುದಾದ ಕಾಲವು, ಎನ್ರೈ ಕೊಲ್ ಎನ್ರು-ಯಾವುದೆಂದು, ಎಪ್ಪೋದುಮ್-ಯಾವಾಗಲೂ, ಕನ್ರೈಯಿಲ್ ಮನಮಿನ್ರಿ-ಬೇರೆ ಚಿನ್ತೆಯೇ ಇಲ್ಲದೆ ಏಕಾಗ್ರಚಿತ್ತನಾಗಿ, ಕಣ್ಣೀರ್‌ಕಳ್ – ಕಣ್ಣುನೀರನ್ನು, ಕಲುೞ್ವನ್ – (ನಾನು) ಸುರಿಸುತ್ತಿರುವೆನು, ನನ್ರೈಯಿಲ್ – ದೋಷರಹಿತನಾದ, ತಿರುನಾರಣನ್ – ಶ್ರೀಮನ್ನಾರಾಯಣನು, ಶೇರ್ – ಸೇರಿ ವಾಸಮಾಡುವ, ತಿರುನಾವಾಯ್-ತಿರುನಾವಾಯ್ ಕ್ಷೇತ್ರದಲ್ಲಿ, ಅನ್ರೈಯುಳ್-ಅವನ ಗೋಷ್ಠಿಯಲ್ಲಿ, ಪುಕಲಾವದು-ಪ್ರವೇಶಿಸಬಹುದಾದ, ಓರ್‌ನಾಳ್-ಒಂದುದಿನವನ್ನು, ಅಱಿಯೇನೇ-ನಾನು ತಿಳಿಯೆನು.

( ಸ-ಗಾ-ರ )—

ಸಂಶ್ಲೇಷಕಾಲಮನಿಶಂ ಚ ವಿಚಿನ್ತ್ಯ ಚಿತ್ತೇ
ನೇತ್ರದ್ವಯೇಽಪ್ಯಹಮಿಹಾಸ್ಮಿ ಹಿ ಸಾಶ್ರುಪೂರಃ |
ನಾರಾಯಣಃ ಕಮಲಯಾ ಸಹ ಭಾತಿ ಹಿ ಶ್ರೀ-
ನಾವಾಯ್-ಪುರೇಽತ್ರ ತು ವಿಶಾಮಿ ಕದಾ ? ನ ವೇದ್ಮಿ ||

ತಾ|| ಆಶ್ರಯಣಕಾಲವು ಎಂದಿಗೆ ಬರುವುದೆಂದು ತದೇಕಚಿನ್ತೆಯಿಂದ ಏಕಾಗ್ರಚಿತ್ತನಾಗಿ ನಾನು ಕಣ್ಣು ನೀರು ಸುರಿಸುತ್ತಿರುವೆನು. ದೋಷಗನ್ಧ ರಹಿತನಾದ ಶ್ರೀಮನ್ನಾರಾಯಣನು ನಿತ್ಯವಾಸಮಾಡುವ ತಿರುನಾವಾಯ್ ಕ್ಷೇತ್ರ ದಲ್ಲಿ ಅವನ ಗೋಷ್ಠಿಯಲ್ಲಿ ನಾನು ಪ್ರವೇಶಿಸಬಹುದಾದ ಒಂದು ದಿನವು ಎಂದಿಗೆ ಬರುವುದೋ ನಾನು ತಿಳಿಯೆನು.

(೪) ನಾಳೇಲಱಿಯೇನೆನಕ್ಕುಳ್ಳನ ನಾನುಮ್
ಮಿಾಳಾವಡಿಮೈ ಪ್ಪಣಿಶೆಯ್ಯ ಪ್ಪುಕುನ್ದೇನ್,
ನೀಳಾರ್ ಮಲರ್‌ಚ್ಚೋಲೈಕಳ್‌ಶೂೞ್ ತಿರುನಾವಾಯ್,
ವಾಳೇಯ್ ತಡಙ್ಕಣ್ ಮಡಪ್ಪಿನ್ನೈ ಮಣಾಳಾ.

ಪ್ರ|| ನೀಳ್-ಉನ್ನತವಾಗಿ, ಆರ್-ಪರಿಪೂರ್ಣವಾಗಿ ಬೆಳೆದಿರುವ, ಮಲರ್-ಪುಷ್ಪಗಳುಳ್ಳ, ಶೋಲೈಕಳ್ - ಉದ್ಯಾನಗಳಿಂದ, ಶೂೞ್-ಪರಿವೃತವಾದ, ತಿರುನಾವಾಯ್-ತಿರುನಾವಾಯ್ ದಿವ್ಯಕ್ಷೇತ್ರದಲ್ಲಿ, ವಾಳೇಯ್-ಮಹಾ ಪ್ರಕಾಶವುಳ್ಳ, ತಡಙ್ಕಣ್- ವಿಶಾಲನೇತ್ರೆಯಾದ, ಮಡಪ್ಪಿನ್ನೈ-ಯೌವನ ಸೌಶೀಲ್ಯಾದಿ ಸಂಪನ್ನೆಯಾದ ನೀಳಾದೇವಿಗೆ, ಮಣಾಳಾ-ಪ್ರಿಯವಲ್ಲಭನಾದ ಸ್ವಾಮಿಯೇ!, ನಾನುಮ್-ನಾನೂ, ಮಿಾಳಾ ಅಡಿಮೈಪ್ಪಣಿಶೆಯ್ಯ - ಅವಿಚ್ಛಿನ್ನ ಕೈಂಕರ್ಯವನ್ನು ಮಾಡಲು, ಪುಕುನ್ದೇನ್-ಪ್ರವೇಶಿಸಿದೆನು. ಎನಕ್ಕು-ನನಗೆ, ಉಳ್ಳನ-ಉಂಟಾಗಿ ಕಲ್ಪಿತವಾದ ನಾಳೇಲ್-ದಿನಗಳನ್ನು, ಅಱಿಯೇನ್-ತಿಳಿಯೆನು.

( ಸ-ಗಾ-ರ || )—

ಉದ್ಯಾನಶೋಭಿ-ಸುಮ-ಸೌರಭವಾಸಿತೇ ಶ್ರೀ-
ನಾವಾಯ್‌ಪುರೇ ಲಸತಿ ಸಂಶ್ರಿತ ಏವ ನೀಳಾಮ್ |
ಪದ್ಮಾಮ್ಬಕಾಂ ಹರಿರಸೌ ಕಿಲ ! ತಸ್ಯ ಸೇವಾಂ
ನಿತ್ಯಂ ಚಿಕೀರ್ಷುರಹಮಸ್ಮಿ ! ಕದಾ ಭಜೇಯಮ್ ? ||

ತಾ|| ದಿವ್ಯ ಪುಷ್ಪೋದ್ಯಾನಭರಿತವಾದ ತಿರುನಾವಾಯ್ ಕ್ಷೇತ್ರದಲ್ಲಿ ವಿಶಾಲ ನಯನೆಯಾದ ನೀಳಾದೇವಿಗೆ ಪ್ರಿಯವಲ್ಲಭನಾದ ಸ್ವಾಮಿಯೇ! ನಿನಗೆ ನಾನೂ ಅವಿಚ್ಛಿನ್ನವಾದ ಕೈಂಕರ್ಯವನ್ನು ಮಾಡಲು ಪ್ರವೇಶಿಸಿದೆನು. ಆದರೂ ನನಗೆ ನಿಯತವಾಗಿ ಕಲ್ಪಿತವಾಗಿರುವ ದಿನಗಳನ್ನು ನಾನು ತಿಳಿಯೆನು.

(೫) ಮಣಾಳನ್ ಮಲರ್‌ಮಙ್ಗೈಕ್ಕುಮ್
ಮಣ್‌ಮಡನ್ದೈಕ್ಕುಮ್,
ಕಣಾಳನುಲಕತ್ತುಯಿರ್ ತೇವರ್‌ಕಟ್ಕೆಲ್ಲಾಮ್,
ವಿಣಾಳನ್ ವಿರುಮ್ಬಿಯುಱೈಯುಮ್ ತಿರುನಾವಾಯ್,
ಕಣಾರಕ್ಕಳಿಕ್ಕಿನ್ಱದಿಙ್ಗೆನ್ಱುಕೊಲ್ ಕಣ್ಡೇ.

ಪ್ರ|| ಮಲರ್‌ಮಙ್ಗೈಕ್ಕುಮ್ – ಪದ್ಮವಾಸಿನಿಯಾದ ಲಕ್ಷ್ಮೀದೇವಿಗೂ, ಮಣ್‌ಮಡನ್ದೈಕ್ಕುಮ್–ಭೂದೇವಿಗೂ, ಮಣಾಳನ್ – ಪ್ರಿಯವಲ್ಲಭನಾದ, ಉಲಕತ್ತು – ಲೋಕದಲ್ಲಿರುವ, ಉಯಿರ್ ತೇವರ್‌ಕಟ್ಕೆಲ್ಲಾಮ್ – ಸಕಲಾತ್ಮದೇವಾದಿಗಳಿಗೆಲ್ಲಾ, ಕಣಾಳನ್ – ನಿರ್ವಾಹಕನಾದ, ವಿಣ್ ಆಳನ್ – ಪರಮಪದನಾಥನಾದ ಸ್ವಾಮಿಯು, ವಿರುಮ್ಬಿ–ಆತ್ಯಾದರದಿಂದ, ಉಱೈಯುಮ್–ನಿತ್ಯವಾಸಮಾಡುವ, ತಿರುನಾವಾಯ್–ತಿರುನಾವಾಯ್‌ಕ್ಷೇತ್ರವನ್ನು, ಕಣ್ ಆರ–ಕಣ್ಣುಗಳು ತುಂಬಾ, ಕಣ್ಡು – (ನಾನು) ನೋಡಿ, ಇಙ್ಗು – ಇಲ್ಲಿ, ಕಳಿಕ್ಕಿನ್ಱದು–ಪರಮಾನನ್ದವನ್ನು ಹೊಂದುವುದು, ಎನ್ಱುಕೊಲ್–ಯಾವಾಗಲೋ !

( ಸ–ಗಾ–ರ || )—

ಭರ್ತಾ ಶ್ರಿಯೋಽಪಿ ಚ ಭುವೋಽಪಿ ಚ ದೇವತಾನಾಂ
ಸರ್ವಾತ್ಮನಾಂ ಪ್ರಭುರಸೌ ಪರಮೇ ಪದೇಽಪಿ |
ನಾವಾಯ್‌ಪುರೇ ವಸತಿ ಸಾದರಮಚ್ಯುತೋಽಮುಂ
ದೃಷ್ಟ್ವಾ ಕದಾಽಕ್ಷಿಯುಗಳೇನ ಸುಖಂ ಭಜೇಯಮ್ ? ||

ತಾ|| ಶ್ರೀದೇವಿಗೂ ಭೂದೇವಿಗೂ ಪ್ರಿಯವಲ್ಲಭನಾದ ಸಕಲ ದೇವಾಧಿಪತಿಯಾದ ಪರಮಪದನಾಥನಾದ ಸ್ವಾಮಿಯು ಆತ್ಯಾದರದಿಂದ ನಿತ್ಯವಾಸಮಾಡುವ ತಿರುನಾವಾಯ್ ಕ್ಷೇತ್ರವನ್ನು ನಾನು ಕಣ್ಣುಗಳಿಂದ ಚೆನ್ನಾಗಿ ನೋಡಿ ಆನನ್ದಿಸುವ ಕಾಲವು ಎಂದಿಗೆ ಬರುವುದೋ !

(೬) ಕಣ್ಡೇ ಕಳಿಕ್ಕಿನ್ಱದಿಙ್ಗೆನ್ಱು ಕೊಲ್ ಕಣ್ಗಳ್
ತೊಣ್ಡೇಯುನಕ್ಕಾಯೊೞಿನ್ದೇನ್ ತುರಿಶಿನ್ಱಿ,
ವಣ್ಡಾರ್ ಮಲರ್‌ಚ್ಚೋಲೈಕಳ್‌ಶೂೞ್ ತಿರುನಾವಾಯ್,
ಕೊಣ್ಡೇ ಯುಱೈಕಿನ್ಱ ವೆಙ್ಕೋವಲರ್ ಕೋವೇ.

ಪ್ರ॥ ವಣ್ಡು ಅರ್-ಭ್ರಮರಗಳಿಂದ ಭರಿತವಾದ, ಮಲರ್‌ಶೋಲೈಕಳ್ - ಪುಷ್ಪೋದ್ಯಾನಗಳಿಂದ, ಶೂಝ್-ಪರಿವೃತವಾದ, ತಿರುನಾವಾಯ್-ತಿರುನಾವಾಯ್ ಕ್ಷೇತ್ರವನ್ನು, ಕೊಣ್ಡು-ವಾಸಸ್ಥಾನ ಮಾಡಿಕೊಂಡು, ಉತ್ರೈಕಿನ್ಱ - ನಿತ್ಯವಾಸ ಮಾಡುವ, ಎಙ್ಗ್ ಕೋವಲರ್ ಕೋವೇ-ನಮ್ಮ ಗೋಪಾಲಕರಿಗೆ ನಾಯಕನಾದ ಸ್ವಾಮಿಯೇ! ತುರಿಶಿನ್ಱಿ-ವಞ್ಚನೆಯಿಲ್ಲದೆ, ಉನಕ್ಕೇ-ನಿನಗೇ, ತೊಣ್ಡಾಯ್ ಒಝಿನ್ದೇ-ಚಾಪಲ್ಯವುಳ್ಳ ದಾಸನಾಗಿ ಬಿಟ್ಟೆನು. ಕಣ್‌ಕಳ್-ನನ್ನ ಕಣ್ಣುಗಳು, ಇಙ್ಗೆ-ಇಲ್ಲಿಯೇ, ಕಣ್ಡೇ ಕಳಿಕ್ಕಿನ್ಱದು-ನಿರನ್ತರವಾಗಿ (ನಿನ್ನನ್ನು) ಕಣ್ಡು ಆನಂದಿಸೋಣವು, ಎನ್ಱು ಕೊಲ್-ಎಂದಿಗೋ!

( ಸ-ಗಾ-ರ ॥ )—

ಭೃಙ್ಗಾವಳೀಭರಿತಪುಷ್ಪವನಾವೃತೇ ಶ್ರೀ-
ನಾವಾಯ್‌ಪುರೇ ವಿಜಯಸೇ ಸತತಂ ಹರೇ! ತ್ವಮ್ ।
ಗೋಪಾಲನಾಥ! ತವ ಸತ್ಯಮಹಂ ಹಿ ದಾಸೋ!
ನೇತ್ರದ್ವಯಂ ಮಮ ಹಿ ದರ್ಶನಸೌಖ್ಯಕಾಂಕ್ಷಿ ॥

ತಾ॥ ಭೃಂಗಾವಳೀಭರಿತವಾದ ಪುಷ್ಪೋದ್ಯಾನಗಳಿಂದ ಪರಿವೃತವಾದ ತಿರುನಾವಾಯ್ ಕ್ಷೇತ್ರವನ್ನು ವಾಸಸ್ಥಾನವಾಗಿ ಮಾಡಿಕೊಂಡು ಇರುವ ನಮ್ಮ ಗೋಪಾಲನಾಥನೇ! ವಂಚನೆಯಿಲ್ಲದೆ ನಿನಗೇ ನಿತ್ಯಕೈಂಕರ್ಯವಂ ಮಾಡುವ ದಾಸನಾಗಿ ಬಿಟ್ಟೆನು. ನನ್ನ ಕಣ್ಣುಗಳು ಇಲ್ಲಿಯೇ ನಿರನ್ತರವಾಗಿ ನಿನ್ನನ್ನು ಕಂಡು ಆನನ್ದಿಸೋಣವು ಎಂದಿಗೋ!

(೭) ಕೋವಾಕಿಯ ಮಾವಲಿಯೈ ನಿಲಙ್ಕೊಣ್ಡಾಯ್,
ತೇವಾಶುರಮ್ ಶೆಱ್ಱವನೇ ತಿರುಮಾಲೇ,
ನಾವಾಯುಱೈಕಿನ್ಱ ಎನ್ ನಾರಣನಮ್ಬೀ,
ಆವಾವೆಡಿಯಾನಿವನೆನ್ಱರುಳಾಯೇ.

ಪ್ರ॥ ಕೋ ಆಕಿಯ-ಮೂರುಲೋಕಗಳಿಗೂ ತಾನು ಒಡೆಯನೆಂದು ಭಾವಿಸಿ ಇದ್ದ, ಮಾವಲಿಯೈ-ಮಹಾಬಲಿಯನ್ನು, ನಿಲಮ್ ಕೊಣ್ಡಾಯ್-ಭೂಮಿಯನ್ನು ಯಾಚಿಸಿ ತೆಗೆದುಕೊಣ್ಡವನಾದ, ತೇವಾಶುರಮ್ - ದೇವಾಸುರವಿಭಾಗದಿಂದ ಉಂಟಾದ ವಿರೋಧವನ್ನು, ಶೆಱ್ಱವನೇ-ಪರಿಹರಿಸಿ ಎಲ್ಲರಿಗೂ ನೀನೇ ಶರಣ್ಯನಾದ

ವನೇ!, ನಾವಾಯ್ ಉೞ್ಱ್ರೈಕಿನ್ಱ-ತಿರುನಾವಾಯ್‌ಕ್ಷೇತ್ರದಲ್ಲಿ ನಿತ್ಯವಾಸಮಾಡುವ, ಎನ್ ನಾರಣನವಿನ್ನ್ - ನನ್ನ ನಾರಾಯಣನೆಂಬ ಸಮಸ್ತಗುಣವಿಭೂತ್ಯಾದಿ ಪರಿಪೂರ್ಣನೇ!, ತಿರುಮಾಲೇ - ಶ್ರಿಯಃಪತಿಯೇ! ಅವಾ- ಅಯ್ಯೋ! ಇವನ್ - ಇವನು, ಅಡಿಯಾನೆನ್ಱು - ನಮಗೆ ದಾಸನೆಂದು, ಅರುಳಾಯೇ - (ನನ್ನಲ್ಲಿ) ಕೃಪೆಮಾಡು.

( ಸ-ಗಾ-ರ || )—

ಅರ್ಥೀ ಮಹಾಬಲಿಕರಾತ್ ಪೃಥಿವೀಂ ಚ ಹೃತ್ವಾ
ದೇವಾಸುರಾದಿಸಮರಾನ್ತಕ! ದೇವದೇವ |
ನಾರಾಯಣಾತ್ರ ಕಮಲಾಸಹಿತೋಽಸಿ ಹಿ ಶ್ರೀ-
ನಾವಾಯ್‌ಪುರೇ! ಕುರು ದಯಾಂ ಮಯಿ ದಾಸಭೂತೇ ||

ತಾ|| ಮೂರುಲೋಕಗಳಿಗೂ ತಾನೇ ಒಡೆಯನೆಂದು ಭಾವಿಸಿ ಇದ್ದ ಮಹಾಬಲಿಯನ್ನು ಯಾಚಿಸಿ ಭೂಮಿಯನ್ನು ದಾನವಾಗಿ ತೆಗೆದುಕೊಂಡ ದೇವಾಸುರ ವಿರೋಧಪರಿಹಾರಕನಾದ ಸರ್ವೇಶ್ವರನೇ! ತಿರುನಾವಾಯ್‌ಕ್ಷೇತ್ರದಲ್ಲಿ ನಿತ್ಯವಾಸಮಾಡುವ ಶ್ರೀಮನ್ನಾರಾಯಣನೇ! "ಅಯ್ಯೋ! ಇವನು ನಮ್ಮದಾಸನು! ಇವನನ್ನು ಕೈಬಿಡಬಾರದು"—ಎಂದು ನನ್ನಲ್ಲಿ ನೀನು ಕೃಪೆಮಾಡು.

(೮) ಅರುಳಾದೊೞಿವಾಯರುಳ್ ಶೆಯ್‌ದಡಿಯೇನ್ನೈ,
ಪ್ಪೊರುಳಾಕ್ಕಿ ಯುನ್‌ಪೊನ್ನಡಿಕ್ಕೀೞ್ ಪ್ಪುಕವೈಪ್ಪಾಯ್,
ಮರುಳೇಯಿನ್ಱಿ ಯುನ್ನೈ ಯೆನ್ನೆಞ್ಜತ್ತಿರುತ್ತುಮ್
ತೆರುಳೇ ತರು ತೆನ್ ತಿರುನಾವಾಯೆನ್ ತೇವೇ.

ಪ್ರ|| ಅರುಳಾದೊೞಿವಾಯ್ - ಕೃಪೆಮಾಡದೆ ಇದ್ದರೂ ಇರುತ್ತೀಯೆ, (ಅಥವಾ) ಅಡಿಯೇನೈ-ಅನನ್ಯಾಶ್ರಯನಾದ ನನ್ನನ್ನು, ಅರುಳ್‌ಶೆಯ್‌ದು - ಕೃಪೆಮಾಡಿ, ಪೊರುಳಾಕ್ಕಿ-ಒಂದು ವಸ್ತುವಾಗಿಮಾಡಿ, ಉನ್‌ಪೊನ್ನಡಿಕ್ಕೀೞ್-ನಿನ್ನ ರಮಣೀಯವಾದ ಪಾದಗಳ ಕೆಳಗೆ, ಪುಕ-ಪ್ರವೇಶಿಸುವಂತೆ, ವೈಪ್ಪಾಯ್-ಮಡಗಿದರೂ ಮಡಗುತ್ತೀಯೆ (ನಿನ್ನ ಇಷ್ಟಬಂದಂತೆ ಮಾಡುತ್ತೀಯೆ). ತೆನ್ ತಿರುನಾವಾಯ್-ರಮ್ಯವಾದ ತಿರುನಾವಾಯ್‌ಕ್ಷೇತ್ರದಲ್ಲಿ, ಎನ್ ತೇವೇ - ನನ್ನ ಸ್ವಾಮಿಯಾದವನೇ!, ಮರುಳೇ ಇನ್ಱಿ - ಯಾವಾಗಲೂ ಅಜ್ಞಾನಗನ್ಧವೇ ಇಲ್ಲದಂತೆ,

ಉನ್ನೈ-ಭೋಗ್ಯನಾದ ನಿನ್ನನ್ನು, ಎನ್ನೆಞ್ಞತ್ತು-ನನ್ನ ಮನಸ್ಸಿನಲ್ಲಿ, ಇರುತ್ತುಮ್-ಇಟ್ಟು ಅನುಭವಿಸುವಂತೆ,ತೆರುಳೇ-ವಿಶದಜ್ಞಾನವನ್ನೇ, ತರು-(ನನಗೆ) ಕೊಡು.

( ಸ-ಗಾ-ರ ॥ )—

ಕಿಂ ತ್ವಂ ಕರೋಷಿ ನ ಕೃಪಾಂ ಮಯಿ ? ಕಿಂ ಕರೋಷಿ
ತ್ವತ್ಪಾದಪದ್ಮಯುಗಳೇ ಕೃಪಯಾಽಥವಾ ಮಾಮ್ ।
ಸ್ವೈರಂ ಕುರುಷ್ವ! ಮನಸೀಶ ಮಮಾನಘೇ ತ್ವಾಂ
ನಾವಾಯ್-ಪುರೇಶ! ಕಲಯೇ! ಸುಮತಿಂ ಪ್ರದೇಹಿ ॥

ತಾ॥ ನನ್ನಲ್ಲಿ ನೀನು ಕೃಪೆಮಾಡಿದೆ ಇದ್ದರೂ ಸರಿಯೆ! ಅಥವಾ ಕೃಪೆಮಾಡಿ ನನ್ನನ್ನು ಒಂದು ವಸ್ತುವಾಗಿ ಅಂಗೀಕರಿಸಿ ನಿನ್ನ ಪಾದಗಳ ಕೆಳಗೆ ಇಟ್ಟರೂ ಸರಿಯೆ! ನಿನ್ನ ಇಷ್ಟಬಂದಂತೆ ಮಾಡು. ತಿರುನಾವಾಯ್‌ಕ್ಷೇತ್ರದಲ್ಲಿರುವ ನನ್ನ ಸ್ವಾಮಿಯೇ! ನಾನು ಅಜ್ಞಾನಗನ್ಧವೇ ಇಲ್ಲದಂತೆ ನಿತ್ಯಭೋಗ್ಯನಾದ ನಿನ್ನನ್ನು ನನ್ನ ಮನಸ್ಸಿನಲ್ಲಿಟ್ಟು ಅನುಭವಿಸುವಂತೆ ನನಗೆ ವಿಶದಜ್ಞಾನವನ್ನು ಅನುಗ್ರಹಿಸು.

(೯) ತೇವರ್ ಮುನಿವರ್‌ಕ್ಕೆನ್ರುಂಕಾಣ್ಡರ್ಕರಿಯನ್,
ಮೂವರ್‌ಮುದಲ್ವನೊರು ಮೂವುಲಕಾಳಿ,
ತೇವನ್‌ವಿರುಪ್ಪು ಉಱೈಯುಮ್ ತಿರುನಾವಾಯ್,
ಯಾವರಣುಕಪ್ಪೆಱುವಾರಿನಿ ಯನ್ನೋ.

ಪ್ರ॥ ತೇವರ್ ಮುನಿವರ್‌ಕ್ಕು – ದೇವತೆಗಳಿಗೂ ಸನಕಾದಿಮುನಿಗಳಿಗೂ ಕೂಡ, ಎನ್ರುಮ್–ಎಂದಿಗೂ, ಕಾಣ್ಡರ್ಕು ಅರಿಯನ್ – ಕಾಣಲು ಅಶಕ್ಯನಾದ ಮೂವರ್ ಮುದಲ್ವನ್–ಬ್ರಹ್ಮರುದ್ರೇನ್ದ್ರರೆಂಬ ಮೂರುಮಂದಿಗೂ ಕಾರಣಭೂತನಾದ, ಒರು ಮೂವುಲಕಾಳಿ–ಅದ್ವಿತೀಯನಾದ ತ್ರೈಲೋಕ್ಯಾಧಿಪತಿಯಾದ, ತೇವನ್ ವಿರುಪ್ಪು–ಸರ್ವೇಶ್ವರನಾದ ಸ್ವಾಮಿಯು ಆಶೆಪಟ್ಟು, ಉಱೈಯುಮ್–ನಿತ್ಯವಾಸ ಮಾಡುವ, ತಿರುನಾವಾಯ್–ತಿರುನಾವಾಯೆಂಬ ಕ್ಷೇತ್ರವನ್ನು, ಅನ್ನೋ–ಅಯ್ಯೋ! ಇನಿ – ಇನ್ನುಮೇಲೆ, ಅಣುಕಪ್ಪೆಱುವಾರ್ – ಸಮೀಪಿಸಿ ಆಶ್ರಯಿಸುವವರು, ಯಾವರ್–ಯಾರು ?

( ಸ–ಗಾ–ರ || )—

ದೇವಾದಿಭಿಶ್ಚ ಮುನಿಭಿಶ್ಚ ನ ಶಕ್ಯತೇ ಯೋ
ದ್ರಷ್ಟುಂ ತ್ರಿಮೂರ್ತಿಜನನಸ್ಯ ಚ ಮೂಲಭೂತಃ |
ಲೋಕತ್ರಯಾಧಿಪತಿರಸ್ತಿ ಸ ಸಾದರಂ ಶ್ರೀ–
ನಾವಾಯ್–ಪುರೇ ಬತ ! ತಮದ್ಯ ಭಜನ್ತಿ ಕೇ ವಾ ? ||

ತಾ|| ದೇವತೆಗಳಿಗೂ ಮುನಿಗಳಿಗೂ ಕೂಡ ಅದೃಶ್ಯನಾದ, ಬ್ರಹ್ಮ ರುದ್ರೇನ್ದ್ರ ಕಾರಣಭೂತನಾದ, ತ್ರೈಲೋಕ್ಯಾಧಿಪತಿಯಾದ ಸರ್ವೇಶ್ವರನು ಆಶೆಯಿಂದ ನಿತ್ಯವಾಸಮಾಡುವ ತಿರುನಾವಾಯ್ ಎಂಬ ಕ್ಷೇತ್ರವನ್ನು ಇನ್ನುಮೇಲೆ (ಈಗ) ಆಶ್ರಯಿಸುವ ಮಹನೀಯರು ಯಾರು ? ಅಯ್ಯೋ ! ಯಾರೂ ಇಲ್ಲವಷ್ಟೆ

(೧೦) ಅನ್ದೋ ಅಣುಕಪ್ಪೆಱುನಾಳೆನ್ಱೆಪ್ಪೋದುಮ್,
ಶಿನ್ದೈಕಲಙ್ಗಿ ತ್ತಿರುಮಾಲೆನ್ಱಳೈಪ್ಪನ್,
ಕೊನ್ದಾರ್ ಮಲರ್ಚ್ಚೋಲೈಕಳ್‌ಶೂೞ್ ತಿರುನಾವಾಯ್,
ವನ್ದೇ ಯುಱೈಕಿನ್ಱ ಎಮ್ಮಾ ಮಣಿವಣ್ಣಾ.

ಪ್ರ|| ಕೊನ್ದು ಆರ್ – ಗುಚ್ಛಗುಚ್ಛಗಳಿಂದ ಪರಿಪೂರ್ಣವಾದ, ಮಲರ್ ಶೋಲೈಕಳ್– ಪುಷ್ಪಗಳುಳ್ಳ ಉದ್ಯಾನಗಳಿಂದ, ಶೂೞ್–ಪರಿವೃತವಾದ, ತಿರುನಾವಾಯ್– ತಿರುನಾವಾಯೆಂಬ ಕ್ಷೇತ್ರದಲ್ಲಿ, ವನ್ದೇ–ಪರಮಪದವನ್ನು ಬಿಟ್ಟುಬಂದು, ಉಱೈಕಿನ್ಱ–ನಿತ್ಯವಾಸಮಾಡುವ, ಎಮ್ ಮಾಮಣಿವಣ್ಣಾ–ನಮ್ಮ ಶ್ಲಾಘ್ಯವಾದ ನೀಲರತ್ನದಂತೆ ಇರುವ ಶರೀರಕಾನ್ತಿಯುಳ್ಳವನೇ !, ಅನ್ದೋ – ಅಯ್ಯೋ !, ಅಣುಕಪ್ಪೆಱುನಾಳ್ ಎನ್ಱು – (ನಿನ್ನನ್ನು) ಆಶ್ರಯಿಸುವಕಾಲವು ಯಾವುದೋ ಎಂದು, ಎಪ್ಪೋದುಮ್–ಎಂದಿಗೂ, ಶಿನ್ದೈಕಲಙ್ಗಿ–ಮನಃಕ್ಷೋಭವನ್ನು ಹೊಂದಿ, ತಿರುಮಾಲೆನ್ಱು–ಶ್ರಿಯಃಪತಿಯೇ ಎಂದು, ಅೞೈಪ್ಪನ್–(ನಾನು) ಕೂಗುತ್ತಿರುವೆನು.

( ಸ- ಗಾ–ರ || )—

ಆರಾಮಶೋಭಿನಿ ವಿಭಾಸಿ ಕಿಲಾಗತಶ್ಶ್ರೀ–
ನಾವಾಯ್–ಪುರೇಽದ್ಯ ಮಣಿವರ್ಣ ! ಕದಾ ಭಜೇ ತ್ವಾಮ್ ? |
ಇತ್ಯೇವ ಸನ್ತತವಿಚಿನ್ತನತಃ ಕಿಲ ತ್ವಾಂ
ಶ್ರೀಶೇತಿ ಹನ್ತ ! ಹೃದಯಾದ್ರ್ರತಯಾ ಽಽಹ್ವಯಾಮಿ ||

ತಾ॥ ಪುಷ್ಪೋದ್ಯಾನಪರಿವೃತವಾದ ತಿರುನಾವಾಯ್ ಕ್ಷೇತ್ರದಲ್ಲಿ ಪರಮಪದ ದಿಂದ ಬಂದು ನಿತ್ಯವಾಸಮಾಡುವ ನಮ್ಮ ನೀಲಮಣಿವರ್ಣನಾದ ಸ್ವಾಮಿಯೇ! ಅಯ್ಯೋ! ನಿನ್ನನ್ನು ಆಶ್ರಯಿಸುವ ಕಾಲವು ಎಂದಿಗೆ ಬರುವುದೋ—ಎಂದು ನಾನು ಮನಃಕ್ಷೋಭದಿಂದ "ಶ್ರಿಯಃಪತಿಯೇ"--ಎಂದು ನಿನ್ನನ್ನು ಕೂಗುತ್ತಿರುವೆನು.

(೧೧) ವಣ್ಣಮ್ಮಣಿಮಾಡವಮ್ ನನ್ನಾವಾಯುಳ್ಳಾನ್ನೈ,
ತಿಣ್ಣಮದಿಳ್ ತೆನ್ಕುರುಕೂರ್ ಚ್ಚಡಕೋಪನ್,
ಪಣ್ಣಾರ್ ತಮಿಳಾಯಿರತ್ತಿಪ್ಪತ್ತುಮ್ ವಲ್ಲಾರ್
ಮಣ್ಣಾಣ್ಡು ಮಣಙ್ಕಮ್ಳ್ವರ್ ಮಲ್ಲಿಕೈಯೇ.

ಪ್ರ॥ ವಣ್ಣಮ್-ನಾನಾವರ್ಣಗಳುಳ್ಳ, ಮಣಿಮಾಡಮ್-ರತ್ನಮಯ ಸೌಧಗಳುಳ್ಳ, ನಲ್-ಶ್ಲಾಘ್ಯತಮವಾದ (ಪವಿತ್ರವಾದ), ನಾವಾಯುಳ್ಳಾನ್ನೈ-ತಿರುನಾವಾಯ್ ಕ್ಷೇತ್ರದಲ್ಲಿರುವ ಸ್ವಾಮಿಯನ್ನು ಕುರಿತು, ತಿಣ್-ದೃಢವಾದ, ಅಮ್-ರಮ್ಯವಾದ, ಮದಿಳ್-ಪ್ರಾಕಾರಗಳುಳ್ಳ, ತೆಕುರುಕೂರ್-ಶ್ರೀ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ಶಠಾರಿಮುನಿಯು ರಚಿಸಿದ, ಪಣ್ ಆರ್-ಪದ್ಯಗಳಿಂದ ಪರಿಪೂರ್ಣವಾದ, ತಮಿಳ್ ಆಯಿರತ್ತು - ದ್ರಾವಿಡ ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್ ವಲ್ಲಾರ್-ಈ ದಶಕವನ್ನು ಬಲ್ಲವರು, ಮಣ್-ಲೀಲಾವಿಭೂತಿಯನ್ನು, ಆಣ್ಡು-ಯಥೇಷ್ಟವಾಗಿ ಆಳಿ, ಮಲ್ಲಿಕೈಯೇ-ಮಲ್ಲಿಗೆಯಂತೆಯೇ ಪರಿಶುದ್ಧವಾದ, ಮಣಮ್ ಕಮ್ಳ್ವರ್-(ಪರಮಪದದ) ದಿವ್ಯಗನ್ಧವೆಂಬ ಯಶಸ್ಸೌರಭ್ಯವಿಕಾಸವನ್ನು ಹೊಂದುವರು.

( ಸ-ಗಾ-ರ ॥ )—

ರಮ್ಯೇ ವಿಭಾತಿ ಮಣಿಸೌಧಯುತೇ ಹರಿಶ್ರೀ-
ನಾವಾಯ್-ಪುರೇ ! ತಮಿಮಮೇವ ಶಠಾರಿಸೂರಿಃ ।
ಸ್ತೋತುಂ ಸಹಸ್ರಗಣಿತೇ ದಶಕಂ ವ್ಯತಾನೀ-
ದೇತತ್ಪಠನ್ತ ಇಹ ಯಾನ್ತಿ ಹಿ ದಿವ್ಯಗನ್ಧಮ್ ॥

ತಾ॥ ನಾನಾವರ್ಣಯುಕ್ತವಾದ ರತ್ನಮಯ ಸೌಧಪರಿವೃತವಾದ ತಿರುನಾವಾಯ್ ಕ್ಷೇತ್ರದ ಸ್ವಾಮಿಯನ್ನು ಕುರಿತು ಶ್ರೀ ಕುರುಕಾಪುರಿಯ ಶಠಾರಿಮುನಿಯು

ಸ್ತೋತ್ರರೂಪವಾಗಿ ರಚಿಸಿರುವ ದ್ರಾವಿಡಭಾಷಾತ್ಮಕವಾದ ಸಹಸ್ರಪದ್ಯಮಾಲಿಯೊಳು ಈ ದಶಕವನ್ನು ಬಲ್ಲವರು ಈ ಲೀಲಾವಿಭೂತಿಯಲ್ಲಿ ಯಥೇಷ್ಟವಾಗಿ ಐಶ್ವರ್ಯದಿಂದ ಸುಖವನ್ನು ಹೊಂದಿ ಪರಮಪದದಲ್ಲೂ ದಿವ್ಯಗನ್ಧದಿಂದ ಯುಕ್ತರಾಗಿ ಪರಮಾನನ್ದಭರಿತರಾಗುವರು.

( ದ್ರ-ಉ-ಸಂ ॥ )—

ಈಶೇ ಸಮಾಜಿಗಮಿಷತ್ಯಪಿ ದೂತವಾಕ್ಯೈ-
ಸ್ತಾವದ್ವಿಲಮ್ಬಮಸಹನ್ಮುನಿರಸ್ಯ ಭೌಮಮ್ |
ದೇವೀಜುಷಃ ಕಮಪಿ ದೇಶವಿಶೇಷಮಾರಾ-
ದ್ಧ್ಯಾಯನ್ ಕದೇತ್ಯವಧಿಮಾರ್ಥಯದಷ್ಟಮೇನ ॥

( ದ್ರ-ಉ-ತಾ-ರ ॥ )—

ವಲ್ಲೀಮಧ್ಯತ್ವಯೋಗಾದಪಿ ಚ ಸುವಿದಿತಶ್ರೀವಚೋವಾಚ್ಯಭಾವಾತ್
ಭೂಮ್ಯಾದ್ಯೈಶ್ವರ್ಯಯೋಗಾದವಕರಣದಶಾಸಾಹಚರ್ಯಾಚ್ಚ ಭರ್ತುಃ |
ಸನಾಥತ್ವಾತ್ಸ್ವಬೋಧಪ್ರದದುರಿತಹರತ್ವಾತ್ಸಮಾಸನ್ನಭಾವಾ-
ಲ್ಲಕ್ಷ್ಮ್ಯಶ್ಲಿಷ್ಟೇಶಂ ಶಠಾರಿಃ ಪೃಥು ನುತಿ ಚ ಸುಮನೋಜ್ಞಾನಿ ಭಾವೇನ ನಾಥಮ್ ॥

( ಈ ಅಷ್ಟಮದಶಕದ ಸಾರಾಂಶ—)

ಈ ಎಂಟನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಿರುನಾವಾಯ್ ಕ್ಷೇತ್ರದ ಸ್ವಾಮಿಯನ್ನೇ ಅತ್ಯಾದರದಿಂದ ಭಜಿಸಿ ಅನುಭವಿಸಬೇಕೆಂದು ಉದ್ದೇಶಿಸಿ, ಆ ಕ್ಷೇತ್ರವನ್ನು ಎಂದಿಗೆ ಸೇರುವೆನೆಂತಲೂ, ಅವನ ನಿತ್ಯಕೈಂಕರ್ಯವು ನನಗೆ ಎಂದಿಗೆ ಲಭ್ಯವಾಗುವುದೆಂತಲೂ, ಆ ಕ್ಷೇತ್ರವು ನನಗೆ ಎಂದಿಗೆ ಚಕ್ಷುರ್ಗೋಚರವಾಗುವುದೆಂತಲೂ, ಅವನ ಕೃಪೆಗೆ ನಾನು ಎಂದಿಗೆ ಪಾತ್ರನಾಗುವೆನೆಂತಲೂ ಮೊರೆಯಿಡುತ್ತ — "ನಿನ್ನನ್ನೇ ಅನುಭವಿಸುವಂತೆ ವಿಶದಜ್ಞಾನವನ್ನು ನನಗೆ ಅನುಗ್ರಹಿಸಬೇಕು" ಎಂದು ಆ ಶ್ರಿಯಃಪತಿಯಾದ ಸರ್ವೇಶ್ವರನನ್ನು ಪ್ರಾರ್ಥಿಸಿ ಇರುತ್ತಾರೆ.



ಶ್ರೀಃ

# ನವಮಶತಕದಲ್ಲಿ—ನವಮದಶಕ.

(ಮಲ್ಲಿಕ್ಕೈಕಮೞ್—)

(ಈ ದಶಕದಲ್ಲಿ ಶ್ರೀಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ ಶ್ರೀ ಭಗವಂತನ ಕಲ್ಯಾಣಗುಣಗಳನ್ನೂ ದಿವ್ಯರೂಪಾದಿಸೌನ್ದರ್ಯವನ್ನೂ ಅನುಸನ್ಧಾನಮಾಡಿ, ಉತ್ಕಟವಾದ ಸಂಶ್ಲೇಷಾಭಿಲಾಷೆಯಿಂದ ಗೋಪೀಜನರಂತೆ ವಿಶ್ಲೇಷವಂ ಸಹಿಸಲಾರದೆ ಸ್ಮಾರಕ ವಸ್ತುಗಳನ್ನು ನೋಡಿ ಮೊರೆಯಿಡುತ್ತಾರೆ.)

---

(೧) ಮಲ್ಲಿಕ್ಕೈಕಮೞ್ ತೆನ್ಱಲೀರುಮಾಲೋ! ವಣ್‌ಕುಱಿಞ್ಜಿಯಿಶೈ
ತವೞುಮಾಲೋ!
ಶೆಲ್‌ಕದಿರ್‌ಮಾಲೈಯುಮ್ ಮಯಕ್ಕುಮಾಲೋ!
ಶೆಕ್ಕರ್‌ನಲ್‌ಮೇಗಙ್ಗಳ್ ಶಿದೈಕ್ಕುಮಾಲೋ!
ಅಲ್ಲಿಯನ್ತಾಮರೈಕ್ಕಣ್ಣನೆಮ್ಮಾನಾಯರ್‌ಕಳೇಱಿ—
ಯೆನ್ದಮ್ಮಾಯೋನ್,
ಪುಲ್ಲಿಯಮುಲ್ಲೈಕಳುಮ್ ತೋಳುಮ್ ಕೊಣ್ಡು
ಪುಕಲಿಡಮಱಿಕಿಲಮ್ ತಮಿಯಮಾಲೋ.

ಪ್ರ|| ಮಲ್ಲಿಕ್ಕೈಕಮೞ್—ಮಲ್ಲಿಗೆಯ ಪರಿಮಳವುಳ್ಳ, ತೆನ್ಱಲ್—ಮನ್ದಮಾರುತವು, ಈರುಮ್ ಆಲೋ—(ವಿಷಭಕ್ಷಣದೋಷಾದಿಯಲ್ಲಿ) ಚೈತನ್ಯವನ್ನು ನಾಶಪಡಿಸುತ್ತಿದೆ. (ಆಲೋ—ಅಯ್ಯೋ!) ವಣ್‌ಕುಱಿಞ್ಜಿ—ಉದಾರವಾದ ಕುಱಿಞ್ಜಿಯೆಂಬ ಸ್ವರವುಳ್ಳ, ಇಶೈ—ಗಾನವು, ತವೞುಮ್ ಆಲೋ—ಕ್ಷೋಭವನ್ನು ಉಂಟುಮಾಡುತ್ತಿದೆ. ಶೆಲ್ ಕದಿರ್—ಅಸ್ತಮಯವನ್ನು ಹೊಂದುವ ಸೂರ್ಯನುಳ್ಳ, ಮಾಲೈಯುಮ್—ಸನ್ಧ್ಯಾಕಾಲವೂ, ಮಯಕ್ಕುಮ್ ಆಲೋ—ಮೋಹವನ್ನು ಉಂಟುಮಾಡುತ್ತಿದೆ. ಶೆಕ್ಕರ್—ಸನ್ಧ್ಯಾರಾಗವುಳ್ಳ, ನಲ್—ರಮ್ಯವಾದ, ಮೇಕಙ್ಗಳ್—ಮೇಘಗಳು, ಶಿದೈಕ್ಕುಮ್ ಆಲೋ—(ಶರೀರವನ್ನು) ಛೇದಿಸುತ್ತಿವೆ. (ಈಪ್ರಕಾರ ವಿರೋಧಗಳು ಉಂಟಾದ ಮೇಲೆ) ಅಲ್ಲಿ—ವಿಕಸಿತವಾದ, ಅಮ್—ರಮಣೀಯವಾದ, ತಾಮರೈಕ್ಕಣ್ಣನ್—ತಾವರೆಯಂತೆ ಇರುವ ನೇತ್ರಗಳುಳ್ಳ, ಎಮ್ಮಾನ್—ನಮ್ಮ ಸ್ವಾಮಿಯು, ಆಯರ್

ಕಳ್‌ವಿಱು-ಗೋಪರಿಗೆ ವೃಷಭಪ್ರಾಯನಾದ, ಅರಿ ವಿಱು-ಸಿಂಹದಂತೆ ಶ್ರೇಷ್ಠನಾದ, ಎಮ್ಮಾಯೋೞ – ನಮ್ಮ ಮಾಯಾಚೇಷ್ಟಿತನು, ಪುಲ್ಲಿಯ–ಸಂಶ್ಲೇಷಿಸಿದ, ಮುಲೈ ಕಳುಮ್‌ತೋಳುಮ್ – ಸ್ತನಗಳನ್ನೂ ಭುಜಗಳನ್ನೂ, ಕೊಣ್ಡು–ಧರಿಸಿ, ತಮಿಯಮ್–ಬೇರೆ ಇರುವ ನಾವು, ಪುಕಲಿಡಮ್–ಆಶ್ರಯಿಸುವ ಸ್ಥಾನವನ್ನು, ಅತ್ತಿಕಿಲಮ್ ಆಲ್–ನಾವು ತಿಳಿಯೆವು, ಅಯ್ಯೋ!

( ಸ–ಗಾ–ರ ॥ )—

ಮಲ್ಲೀಸೌಗನ್ಧ್ಯಪೂರ್ಣೋ ಪವನಿಲ ಇಹ ಹಿ ಮೇ ಶಸ್ತ್ರವದ್ಭಾತಿ! ದಿವ್ಯಂ
ಗಾನಂ ರಮ್ಯಂ ಚ ಶಲ್ಯಂ! ಜನಯತಿ ನಿತರಾಂ ಮೋಹಮೇವಾಸ್ತಸನ್ಧ್ಯಾ!
ಸನ್ಧ್ಯಾರಕ್ತಾಃ ಪಯೋದಾ ಅಪಿ ಚ ವಿಶಸನಾ ಹನ್ತ! ಕಾನ್ತಂ ವಿನಾ ಮೇ
ಪದ್ಮಾಕ್ಷಂ ಗೋಪಸಿಂಹಂ ಸ್ತನಭುಜಯುಗಳೇ ಕ್ವಾದ್ಯ ಧೃತ್ವಾ
ಪ್ರಯಾಮಿ? ॥

ತಾ॥ ಮಲ್ಲಿಗೆಯ ಪರಿಮಳವುಳ್ಳ ಮನ್ದಮಾರುತವು ನಮ್ಮ ಚೈತನ್ಯವನ್ನು ನಾಶಪಡಿಸುತ್ತಿದೆ. ಅಯ್ಯೋ! ಉದಾರವಾದ ಕುತ್ತಿಲ್ಯೆಂಬ ಸ್ವರವುಳ್ಳ ಗಾನವು ಮನಃಕ್ಷೋಭವನ್ನು ಉಂಟುಮಾಡುತ್ತಿದೆ. ಅಸ್ತಮಯಿಸುವ ಸೂರ್ಯನೊಡನೆ ಕೂಡಿದ ಸನ್ಧ್ಯಾಕಾಲವು ಮೋಹವನ್ನು ಉಂಟುಮಾಡುತ್ತಿದೆ. ಸನ್ಧ್ಯಾರಾಗವುಳ್ಳ ರಮ್ಯವಾದ ಮೇಘಗಳು ಶರೀರವನ್ನು ಛೇದಿಸುತ್ತಿವೆ. ಹೀಗಾದಮೇಲೆ ಪದ್ಮನೇತ್ರನಾದ ನಮ್ಮ ಸ್ವಾಮಿಯು ಸಿಂಹದಂತೆ ವೀರ್ಯವುಳ್ಳವನಾಗಿ ನಮ್ಮೊಡನೆ ಸಂಶ್ಲೇಷಿಸಿದ (ಸುಖವನ್ನು ಅನುಭವಿಸಿದ) ಈ ಸ್ತನಗಳನ್ನೂ ಬಾಹುಗಳನ್ನೂ ಧರಿಸಿಕೊಂಡು, ವಿಶ್ಲೇಷವಂ ಹೊಂದಿರುವ ನಾವು ಈಗ ಯಾವ ಸ್ಥಲದಲ್ಲಿ ಹೋಗಿ ಇರೋಣ? (ನಾವು ತಿಳಿಯೆವು.)

(೭) ಪುಕಲಿಡಮತ್ತಿಕಿಲಮ್ ತಮಿಯಮಾಲೋ! ಪುಲಮ್ಬುಮಣಿ
ತ್ತೆನ್ರಲಾಮ್ಬಲಾಲೋ!
ಪಕಲಡುಮಾಲೈ ವಣ್‌ಶಾನ್ದಮಾಲೋ! ಪಞ್ಚಮಮ್
ಮುಲ್ಲೈತಣ್ ವಾಡೈಯಾಲೋ!
ಅಕಲಿಡಮ್ ಪಡೈತ್ತಿಡನ್ದುಣ್ಡುಮಿೞ್‌ನ್ದಳನ್ದಿಡನ್ದು–
ಮಳಿಕ್ಕತ್ತಿವಾಯ್‌ಮಾಯೋೞ,
ಇಕಲಿಡತ್ತಶುರರ್‌ಕಳ್ ಕೂಱ್ಱಮ್ ವಾರಾನಿನಿ
ಯಿರುನ್ದೆನ್ನುಯಿರ್ ಕಾಕ್ಕುಮಾತ್ತು?

ಪ್ರ|| ತಮಿಯಮ್ – ಬೇರೆಯಾಗಿರುವ ನಾವು, ಪುಕಲಿಡಮ್-ಆಶ್ರಯಿಸ ಬೇಕಾದ ಸ್ಥಾನವನ್ನು, ಅಱಿಕಿಲಮ್-ತಿಳಿಯಲಾರೆವು. ಪುಲಮ್ಬುಱು-ವೃಷಭಗಳ ಕತ್ತಿನಲ್ಲಿ ಶಬ್ದಿಸುವ, ಮಣಿ-ಘಂಟೆಯೂ, ತೆನ್ಱಲ್ – ಮನ್ದಮಾರುತವೂ, ಅಮ್ಬಲಾಲೋ – ಎಲೆಗಳ ಶಬ್ದವೂ ಕೂಡಿಕೊಂಡು ಘೋಷಿಸಿದುವು. ಪಕಲ್ ಅಡುಮಾಲೈ-ಹಗಲನ್ನು ನಾಶಪಡಿಸುವ ಸಾಯಂಕಾಲವೂ, ವಣ್‌ಶಾನ್ದಮಾಲೋ-ರಮ್ಯವಾದ ಚನ್ದನವೂ ಸೇರಿಕೊಂಡುವು. ಪಞ್ಚಮಮ್ – ಪಞ್ಚಮರಾಗವೂ, ಮುಲ್ಲೈ-ಮೊಲ್ಲೆ ಹೂವಿನಮಾಲೆಯೂ, ತಣ್‌ವಾಡೈಯಾಲೋ – ಶೀತಳವಾದ ಗಾಳಿಯೂ ಒಂದಾಗಿ ಸೇರಿದುವು. (ಈ ದಶೆಯಲ್ಲಿ) ಅಕಲಿಡಮ್-ವಿಸ್ತೀರ್ಣವಾದ ಪ್ರಪಂಚವನ್ನು, ಪಡೈತ್ತು-ಸೃಷ್ಟಿಸಿ, ಇಡನ್ದು-ಕಿತ್ತು ಎತ್ತಿ, ಉಣ್ಡು-ಭಕ್ಷಿಸಿ, ಉಮಿೞ್ನ್ದು-ಉಗಿದು, ಅಳನ್ದು-ಅಳೆದು, ಎಙ್ಗುಮ್-ಎಲ್ಲೆಲ್ಲೂ, ಅಳಿಕ್ಕಿನ್ಱ-ಉಪಕಾರಮಾಡುವ, ಆಯನ್-ಗೋಪಾಲಕನಾದ ಕೃಷ್ಣಸ್ವಾಮಿಯಾದ, ಮಾಯೋನ್-ಆಶ್ಚರ್ಯಚೇಷ್ಟಿತನಾದ, ಇಕಲಿಡತ್ತು-ಯುದ್ಧದಲ್ಲಿ ಎದುರಿಗೆ ನಿಂತಿರುವ, ಅಸುರರ್ಕಳ್-ರಾಕ್ಷಸರಿಗೆ, ಕೂಱ್ಱಮ್-ಯಮನಾದವನು, ವಾರಾನ್-(ನನಗೆ ರಕ್ಷಕನಾಗಿ) ಬರುವುದಿಲ್ಲ. ಇನಿ-ಹೀಗಾದಮೇಲೆ, ಎನ್ ಉಯಿರ್-ನನ್ನ ಪ್ರಾಣವನ್ನು, ಇರುನ್ದು-ಸತ್ತೆಯೊಡನೆ, ಕಾಕ್ಕುಮ್ ಆಱು-ರಕ್ಷಿಸುವ ಪ್ರಕಾರವು ಎನ್-ಯಾವುದು ?

( ಸ–ಗಾ–ರ || )—

ಪ್ರಾಪ್ಯಂ ದೇಶಂ ನ ವೇದ್ಮಿ ಸ್ವಯಮಯಮನಿಲೋ ಹನ್ತ! ಘಣ್ಟಾರವೈಶ್ಚ
ಕ್ಲಿಶ್ನಾತ್ಯೇವಾಸ್ತಸನ್ಧ್ಯಾ ಬತ! ಸಪದಿಚ ಮಾನುಜ್ಞರಾಗೈಸ್ಸಮೇತಾ |
ರಾಗೋಽಯಂ ಪಞ್ಚಮೋ ಭಾತ್ಯನಿಲಕುಟಜಮಾಲಾನ್ವಿತೋ ಹನ್ತ!
ಕಾನ್ತೋ
ಗೋಪಾಲೋ ಲೋಕಪಾಲೋ ನ ಹಿ ಸಮುಪಗತಃ! ಪ್ರಾಣರಕ್ಷಾ
ಕಥಂ ಮೇ ? ||

ತಾ|| ವಿಶ್ಲೇಷವಂ ಹೊಂದಿರುವ ನಾವು ಆಶ್ರಯಿಸಬೇಕಾದ ಸ್ಥಾನವನ್ನೇ ತಿಳಿಯಲಾರೆವು ವೃಷಭಗಳ ಕಣ್ಠದಲ್ಲಿ ಶಬ್ದಿಸುವ ಘಂಟೆಗಳೂ, ಮನ್ದಮಾರುತವೂ, ಎಲೆಗಳ ಶಬ್ದವೂ ಎಲ್ಲಾ ಸೇರಿಕೊಂಡು ಘೋಷಿಸುತ್ತಿವೆ ಹಗಲನ್ನು ಮುಗಿಸಿದ ಸಾಯಂಕಾಲವೂ ರಮ್ಯವಾದ ಚನ್ದನವೂ ಸೇರಿಕೊಂಡಿವೆ. ಪಞ್ಚಮರಾಗವೂ ಮೊಲ್ಲೆಹೂವಿನಮಾಲೆಯೂ ಶೀತಳವಾದ ಗಾಳಿಯೂ ಒಂದಾಗಿ ಸೇರಿವೆ. ವಿಸ್ತೀರ್ಣವಾದ ಪ್ರಪಂಚವನ್ನು ಸೃಷ್ಟಿಸಿ, ಅದನ್ನು ಕಿತ್ತು ಎತ್ತಿ, ಅದನ್ನು ಭಕ್ಷಿಸಿ, ಅದನ್ನು ಉಗಿದು, ಅದನ್ನು ಅಳೆದು, ಸರ್ವವಿಧೋಪಕಾರಕನಾದ ಶ್ರೀಕೃಷ್ಣನು ಅಸುರ

ನಾಶಕನಾಗಿ ಈಗ ನನಗೆ ರಕ್ಷಕನಾಗಿ ಬರುವುದಿಲ್ಲ. ನನ್ನ ಪ್ರಾಣವನ್ನು ಹೇಗೆ ರಕ್ಷಿಸುವೆನು?

(೩) ಇನಿಯಿರುನ್ದೆನ್ನುಯಿರ್ ಕಾಕ್ಕುಮಾಱೆನ್ನಿಣೈ ಮುಲೈ
ನಮುಂಕ ನುಣ್ಣಿಡೈನುಡಙ್ಗ,
ತುನಿಯಿರುಮ್ ಕಲವಿಶೆಯ್ದಾಕಮ್ ತೋಯ್ನ್ದು
ತುಱನ್ದೆಮ್ಮೈಯಿಟ್ಟಕಲ್ ಕಣ್ಣರ್ ಕಳ್ವರ್,
ತನಿಯಿಳಶಿಙ್ಗಮೆಮ್ಮಾಯರ್ ವಾರಾರ್
ತಾಮರೈಕ್ಕಣ್ಣುಮ್ ಶೆವ್ವಾಯುಮ್ ನೀಲ-
ಪ್ಪನಿಯಿರುಮ್ ಕುೞಲ್ಕಳುಮ್ ನಾನ್ಗುತೋಳುಮ್
ಪಾವಿಯೇನ್ ಮನತ್ತೇ ನಿನ್ಱೀರುಮಾಲೋ.

ಪ್ರ॥ ಇನಿ-ಹೀಗಾದಮೇಲೆ, ಇರುನ್ದು - ಇದ್ದು, ಎನ್ ಉಯಿರ್ - ನನ್ನ ಪ್ರಾಣವನ್ನು, ಕಾಕ್ಕುಮಾಱು ಎನ್ - ರಕ್ಷಿಸುವಪ್ರಕಾರವು ಯಾವುದು? ಇಣೈ ಮುಲೈ-ಜೊತೆಯಾಗಿ ಸೇರಿ ಇರುವ ಸ್ತನಗಳು, ನಮುಂಕ-ಶಿಥಿಲವಾಗುವಂತೆಯೂ, ನುಣ್ ಇಡೈ - ಸೂಕ್ಷ್ಮವಾದ ಮಧ್ಯವು, ನುಡಙ್ಗ - ಒಡೆದುಹೋಗುವಂತೆಯೂ, ತುನಿ ಇರುಮ್ - ದುಃಖವುಂಟಾಗುವಂತೆ ಬಹುಮುಖವಾಗಿ, ಕಲವಿಶೆಯ್ದು-ಸಂಶ್ಲೇಷವಂ ಮಾಡಿ, ಆಕಮ್ ತೋಯ್ನ್ದು - ನನ್ನ ಶರೀರದಲ್ಲಿ ಪ್ರವೇಶಿಸಿ ಒಂದಾಗಿಸೇರಿ, (ಹೀಗೆಲ್ಲಾ ಮಾಡಿ) ಎಮ್ಮೈತುಱನ್ದು-ನನ್ನನ್ನು ಬಿಟ್ಟು, ಇಟ್ಟು-ಅಚೇತನವಾಗಿಮಾಡಿ, ಅಕಲ್ ಕಣ್ಣನ್ - ಹೊರಟುಹೋದ ಕೃಷ್ಣನಾದ, ಕಳ್ವನ್-ವಞ್ಚಕನಾದ, ತನಿ - ಅದ್ವಿತೀಯನಾದ, ಇಳಮ್‌ಶಿಙ್ಗಮ್ - ಬಾಲಸಿಂಹದಂತೆ ಇರುವ, ಎಮ್ಮಾಯನ್ - ನಮ್ಮ ಮಾಯಾಚೇಷ್ಟಿತನು, ವಾರಾನ್ - ಬರುವುದಿಲ್ಲ. ತಾಮರೈಕ್ಕಣ್ಣುಮ್ - ತಾವರೆಯಂತೆ ಕಣ್ಣುಗಳೂ, ಶೆವ್ವಾಯುಮ್ - ಕೆಂಪಾದ ಬಾಯಿಯೂ, ನೀಲ - ನೀಲವರ್ಣವಾದ, ಪನಿ-ಶೀತಳವಾದ, ಇರುಮ್-ನಿಬಿಡವಾದ, ಕುೞಲ್‌ಕಳುಮ್-ಕೇಶಗಳೂ, ನಾನ್ಗು ತೋಳುಮ್ - ನಾಲ್ಕು ತೋಳುಗಳೂ, ಪಾವಿಯೇನ್-ಪಾಪಿನಿಯಾದ ನನ್ನ, ಮನತ್ತೇ - ಮನಸ್ಸಿನಲ್ಲಿ, ನಿನ್ಱು - ನಿಂತು, ಈರುಮ್-ಹಿಂಸಿಸುತ್ತಿವೆ.

( ಸ-ಗಾ-ರ || )—

ಅತ್ರ ಪ್ರಾಣಾಃ ಕಥಂ ಮೇ ಸಪದಿ ಬತ! ವಹಾಮ್ಯದ್ಯ ಸಂಶ್ಲೇಷತೋ ಮೇ
ಕೃತ್ವಾ ವಕ್ಷೋಜಯುಗ್ಮಂ ಶಿಥಿಲಮಿವ ಕಟಿಂ ಚಾಪಿ ಭುಗ್ನಾಮಿವಾಸೌ |
ಹಿತ್ವಾ ಮಾಂ ಚೋರ ಏವ ಸ್ವಯಮಹಹ! ಹರಿಸ್ತತ್ರ ನಾಯಾತಿ ಕೃಷ್ಣ-
ಸ್ತಸ್ಯಾಕ್ಷಿದ್ವಂದ್ವ-ವಕ್ತ್ರಾದ್ಯಲಕರುಚಿ-ಚತುರ್ಬಾಹವೋ ಮಾಂ ತುದನ್ತಿ ||

ತಾ|| ಹೀಗಾದಮೇಲೆ ನನ್ನ ಪ್ರಾಣವನ್ನು ರಕ್ಷಿಸುವ ಪ್ರಕಾರವೇ ತಿಳಿಯುವುದಿಲ್ಲ. ಸ್ತನಗಳು ಶಿಥಿಲವಾಗಿ, ಸೂಕ್ಷ್ಮವಾದ ಮಧ್ಯವು ಭಗ್ನವಾಗಿ, ಕ್ಲೇಶವುಂಟಾಗುವಂತೆ ಸಂಶ್ಲೇಷವಂ ಮಾಡಿ, ನನ್ನ ಶರೀರದಲ್ಲಿ ಪ್ರವೇಶಿಸಿ ಒಂದಾಗಿಸೇರಿ, ಹೀಗೆಲ್ಲಾ ಮಾಡಿ ನನ್ನನ್ನು ಬಿಟ್ಟು ಹೊರಟುಹೋದ ಕೃಷ್ಣರೂಪಿಯಾದ ವಞ್ಚಕನು ಬಾಲಸಿಂಹದಂತೆ ಮಾಯಾಚೇಷ್ಟಿತನಾಗಿದ್ದವನು ಈಗ ನಮ್ಮ ಸಮೀಪಕ್ಕೆ ಬರುವುದಿಲ್ಲ. ತಾವರೆಯಂತೆ ಕಣ್ಣುಗಳೂ, ಕೆಂಪಾದ ವಕ್ತ್ರವೂ, ನೀಲವರ್ಣವುಳ್ಳ ಕೇಶಗಳೂ, ಚತುರ್ಭುಜಗಳೂ ಪಾಪಿನಿಯಾದ ನನ್ನ ಮನಸ್ಸಿನಲ್ಲಿ ನಿಂತು ಹಿಂಸಿಸುತ್ತಿವೆ.

(೪) ಪಾವಿಯೇನ್ ಮನತ್ತೇ ನಿನ್ಱೀರುಮಾಲೋ!
ವಾಡೈತಣ್ವಾಡೈ ವೆವ್ವಾಡೈಯಾಲೋ!
ಮೇವುತಣ್ ಮದಿಯಮ್ ವೆಮ್ಮದಿಯಮಾಲೋ!
ಮೆನ್ಮಲರ್ಪ್ಪಳ್ಳಿ ವೆಮ್ಪಳ್ಳಿಯಾಲೋ!
ತೂವಿಯಮ್ಪುಳ್ಳುಡೈತ್ತೆಯ್ವವಣ್ಣ ತನ್ದೈನ್ದ
ವೆಮ್ಶೆನ್ನೈಯುಮ್ ಪೂವಿದಾಲೋ!
ಆವಿಯಿನ್ ಪರಮಲ್ಲ ವೇಟ್ಕೈಕಳಾಲೋ! ಯಾಮುಡೈ
ನೆಞ್ಜಮುಮ್ ತುಣೈಯನ್ಱಾಲೋ.

ಪ್ರ|| ಪಾವಿಯೇನಮನತ್ತೇ - ಪಾಪಿನಿಯಾದ ನನ್ನ ಮನಸ್ಸಿನಲ್ಲೇ, ನಿನ್ಱು-ನಿಂತು, ವಾಡೈ - ಬಿರುಗಾಳಿಯು, ಈರುಮ್ - ಹಿಂಸಿಸುತ್ತಿದೆ. ತಣ್ವಾಡೈ - ಶೀತಳವಾದಗಾಳಿಯು, ವೆವ್ವಾಡೈ ಬೆಂಕಿಯಂತೆಸುಡುವ ಗಾಳಿಯಾಗಿದೆ. ಮೇವು-ಆಹ್ಲಾದಕರನಾಗಿ ಅನುಕೂಲನಾದ, ತಣ್-ಶೀತಳವಾದ, ಮದಿಯಮ್-ಚನ್ದ್ರನು, ವೆಮ್ ಮದಿಯಮ್-ಸನ್ತಾಪಕರನಾದ ಚನ್ದ್ರನಾಗಿದಾನೆ. ಮೆನ್ ಮಲರ್ ಪಳ್ಳಿ-ಮೃದುವಾದ ಪುಷ್ಪಶಯನವು, ವೆಮ್ಪಳ್ಳಿ-ಅಗ್ನಿಯಂತೆ ತಾಪಕರವಾದ ಶಯನವಾಗಿದೆ. ಅಮ್-ರಮ್ಯವಾದ, ತೂವಿ-ರೆಕ್ಕೆಗಳುಳ್ಳ, ಪುಳ್-ಗರುಡನನ್ನು, ಉಡೈ-

ವಾಹನವಾಗಿ ಉಳ್ಳ, ತೆಯ್‌ವಮ್ – ಪರದೈವತವಾದ ಸ್ವಾಮಿಯೆಂಬ, ವಣ್ಡು– ಭ್ರಮರವು, ತುದೈನ್ದ–ವ್ಯಾಪಿಸಿ ಇರುವ, ಎಮ್‌ಪೆಣ್ಮೈ–ನನ್ನ ಸ್ತ್ರೀತ್ವರೂಪವಾದ, ಇದು–ಇದು, ಅಮ್‌ಪೂ ಆಲೋ! ರಮ್ಯವಾದ ಪುಷ್ಪದಂತೆ ಇದೆಯಪ್ಪೆ! ವಕೈಕಳ್ –(ಸಂಶ್ಲೇಷವಿಶ್ಲೇಷಾದಿ) ನಾನಾಪ್ರಕಾರಗಳು, ಅವಿಯ್ಯಿ ಪರಮಲ್ಲ – ನನ್ನ ಆತ್ಮ ವಸ್ತುವಿಗೆ ಸಹ್ಯವಾಗಿಲ್ಲ. ಯಾಮುಡೈ – ನಮ್ಮ, ನೆಞ್ಜಮುಮ್–ಮನಸ್ಸೂ, ತುಣೈ ಯನ್ರು–ನಮಗೆ ಅನುಕೂಲವಾಗುವುದಿಲ್ಲ.

( ಸ–ಗಾ–ರ )—

ಪಾಪಿನ್ಯಾ ಮೇಽದ್ಯ ಚಿತ್ತಂ ತುದತಿ ಚ ಪವನೋ ಹನ್ತ! ಶೀತೋಽದ್ಯ ದಾಹೀ
ಚನ್ದ್ರಸ್ಸನ್ತಾಪಕಾರೀ ದಹನವದಹಹ! ಜ್ವಾಲಿನೀ ಪುಷ್ಪಶಯ್ಯಾ |
ಸಾಕ್ಷಾತ್ತಾರ್ಕ್ಷ್ಯಾಧಿರೂಢಂ ತದಪಿ ಚ ಪರಮಂ ದೈವತಂ ಭೃಙ್ಗತುಲ್ಯಂ !
ಭುಕ್ತ್ವಾ ತೇನಾಸ್ಮಿ ಪುಷ್ಪಸ್ರಗಿವ ಮತಿಕೃಶಾ! ದುರ್ದಶಾ ದುಸ್ಸಹಾ ಮೇ! ||

ತಾ|| ಪಾಪಿನಿಯಾದ ನನ್ನ ಮನಸ್ಸಿನಲ್ಲಿ ನಿಂತು ಗಾಳಿಯು ನನ್ನನ್ನು ಹಿಂಸಿಸುತ್ತಿದೆ. ಶೀತಳವಾದ ಮನ್ದಮಾರುತವೂ ಕೂಡ ಅಗ್ನಿಯಂತೆ ಸನ್ತಾಪಕರವಾದ ಗಾಳಿಯಾಗಿದೆ. ಆಹ್ಲಾದಕರನಾದ ಚನ್ದ್ರನೂ ಈಗ ಸನ್ತಾಪಕರನಾಗಿದಾನೆ. ಮೃದುವಾದ ಪುಷ್ಪಶಯನವೂ ಈಗ ನನಗೆ ತಾಪಕರವಾದ ಶಯನವಾಗಿದೆ. ರಮ್ಯವಾದ ರೆಕ್ಕೆಗಳುಳ್ಳ ಗರುಡನನ್ನು ವಾಹನವಾಗಿ ಉಳ್ಳ ಪರದೈವತವೆಂಬ ಭ್ರಮರವು ನಮ್ಮ ಸ್ತ್ರೀತ್ವವೆಂಬ ರಮ್ಯವಾದ ಪುಷ್ಪದಲ್ಲಿ ವ್ಯಾಪಿಸಿ ಭೋಗಿಸುತ್ತಿದೆಯಪ್ಪೆ! ನಾನಾವಿಧವಾದ ಸಂಶ್ಲೇಷಾದಿಗಳು ನನಗೆ ಸಹಿಸಲು ಶಕ್ಯವಾಗಿಲ್ಲ. (ನಮ್ಮ ಮನಸ್ಸೂಕೂಡ ನಮಗೆ ಅನುಕೂಲವಾಗಿಲ್ಲ.)

(೫) ಯಾಮುಡೈ ನೆಞ್ಜಮುಮ್ ತುಣೈಯನ್ರಾಲೋ !
ಆ ಪುಕುಮಾಲೈಯುಮಾಕಿನ್ರಾಲೋ!
ಯಾಮುಡೈ ಯಾಯರ್ ತಕ್ ಮನವ್‌ಕಲ್ಲಾಲೋ!
ಅವನುಡೈ ತೀಮೆಕುಝಲೀರುಮಾಲೋ!
ಯಾಮುಡೈ ತ್ತುಣೈಯೆನ್ನುಮ್ ತೋಝಿಮಾರುಮೆಮ್ಮಿಲ್
ಮುನ್ನವನುಕ್ಕು ಮಾಝ್‌ವರಾಲೋ!
ಯಾಮುಡೈ ಯಾರುಯಿರ್ ಕಾಕ್ಕುಮಾಱನವನುಡೈ
ಯರುಳ್‌ಪೆಱುಮ್ ಪೋದರಿದೇ.

ಪ್ರ|| ಯಾಮುಡೈ-ನಮ್ಮದಾದ, ನೆಞ್ಜಮುಮ್ - ಮನಸ್ಸೂ, ತುಣೈಯನ್ರು ಅಲೋ-ಸಹಾಯವಾಗುವುದಿಲ್ಲ. ಆ-ಪಶುಗಳು, ಪುಕುಮ್-ಬಂದು ಪ್ರವೇಶಿಸುವ, ಮಾಲೈಯುಮ್-ಸಾಯಂಕಾಲವೂ, ಆಕಿನ್ರಾಲೋ - ಆಗುತ್ತಿದೆ. ಯಾಮುಡೈ ಆಯರ್ ಶೇ-ನಮಗೆ ಸುಲಭನಾದ ಗೋಪಾಲಕನಾದ ಕೃಷ್ಣನ, ಮನಮ್-ಮೃದುವಾದ ಮನಸ್ಸು, ಕಲ್ ಆಲೋ - ಕಲ್ಲಾಗಿಬಿಟ್ಟಿತೋ!, ಅವನುಡೈ - ಅವನ, ತೀವ್ ಕುಳಲ್-ರಮ್ಯವಾದ ಕೊಳಲು, ಈರುಮಾಲೋ-ನಮ್ಮನ್ನು ಹಿಂಸಿಸುತ್ತಿದೆ. ಯಾಮುಡೈ-ನಮ್ಮ, ತುಣೈ ಎನ್ನುಮ್- ಸಹಾಯಭೂತರಾದ, ತೋೞಿಮಾರುಮ್-ಸಖೀಜನರೂ, ಎಮ್ಮಿಲ್ ಮುನ-ನನಗೆಮುಂಚೆ, ಅವನುಕ್ಕು-ಅವನಿಗೆ, ಮಾಯ್ವರಾಲೋ-ವಶ್ಯರಾಗುತ್ತಿರುವರು. ಅವನುಡೈ-ಅವನ, ಅರುಳ್ ಪೆಱುಮ್ ಪೋದು-ಕೃಪೆಯನ್ನು ಹೊಂದುವಕಾಲವು, ಅರಿದೇ-ದುರ್ಲಭವಾಗಿದೆ. ಯಾಮುಡೈ-ನಮ್ಮ, ಆರುಯಿರ್ - ಆತ್ಮವಸ್ತುವನ್ನು, ಕಾಕ್ಕುಮಾಱು - ರಕ್ಷಿಸುವಪ್ರಕಾರವು, ಎನ-ಯಾವುದು ?

( ಸ-ಗಾ-ರ || )—

ಚಿತ್ತಂ ಚೇದಂ ನ ಮಿತ್ರಂ ಮಮ! ಸಪದಿ ಪಶೂನಾಹ್ವಯತ್ಯೇವ ಸನ್ಧ್ಯಾ!
ಗೋಪಾಲೋ ನಾಗತೋऽಸೌ ಕಠಿನಹೃದಯ ಏವಾಸ್ಯ
ವೇಣುಸ್ತುದೇನ್ಮಾಮ್ ।
ಹಾ! ಹಾ! ತಂ ಚಾಭಿಯಾತಾ ಮಮ ಕಿಲ ಪುರತೋ ಹನ್ತ! ಮೇ
ಪ್ರಾಣಸಖ್ಯಃ ।
ಕಾರುಣ್ಯಂ ತಸ್ಯ ಮೃಗ್ಯಂ ಮಯಿ! ಕಥಮಧುನಾ ಪ್ರಾಣರಕ್ಷಾ ಭವೇನ್ಮೇ?||

ತಾ|| ನಮ್ಮ ಮನಸ್ಸೂ ನಮಗೆ ಸಹಾಯವಾಗಿಲ್ಲ. ಪಶುಗಳು ಬಂದು ಪ್ರವೇಶಿಸುವ ಸಾಯಂಕಾಲವೂ ಬರುತ್ತಿದೆ. ನಮಗೆ ಸುಲಭನಾದ ಗೋಪಾಲ ಕೃಷ್ಣನ ಮನಸ್ಸು ಈಗ ಕಲ್ಲಾಗಿಬಿಟ್ಟಿತೋ? ಅವನ ರಮ್ಯವಾದ ಕೊಳಲು ನಮ್ಮನ್ನು ಹಿಂಸಿಸುತ್ತಿದೆ. ನಮಗೆ ಸಹಾಯಭೂತರಾದ ಸಖೀಜನರೂ ನನಗೆ ಮುಂಚೆ ಅವನಿಗೆ ವಶ್ಯರಾಗುತ್ತಿರುವರು. ಅವನ ಕೃಪೆಯನ್ನು ಹೊಂದುವಕಾಲವು ದುರ್ಲಭವಾಗಿದೆ. ನಮ್ಮ ಆತ್ಮವಸ್ತುವನ್ನು ರಕ್ಷಿಸುವ ಪ್ರಕಾರವು ಯಾವುದೋ ತಿಳಿಯಲಿಲ್ಲ.

(೬) ಅವನುಡೈಯರುಳ್ ಪೆಱುಮ್ ಪೋದರಿದಾಲವ್ವರುಳಲ್ಲನ
ವರುಳುಮಲ್ಲ,
ಅವನರುಳ್ ಪೆಱುಮಳವಾವಿ ನಿಲ್ಲಾದಡುಪಕಲ್
ಮಾಲ್ಯೆಯುಮ್ ನೆಞ್ಜುಮ್ ಕಾಣೇನ್,
ಶಿವನೊಡು ಪಿರಮನ್ ವಣ್‌ತಿರುಮಡನ್ದೈಶೇರ್
ತಿರುವಾಕಮೆಮ್ಮಾವಿಯೀರುಮ್,
ಎವನಿನಿಪ್ಪುಕುಮಿಡಮೆವನ್ ಶೆಯ್‌ಕೇನೋ
ಆರುಕ್ಕೆನ್ ಶೊಲ್ಲುಕೇನನ್ನೈಮೀರ್ ಕಾಳ್.

ಪ್ರ॥ ಅವನುಡೈ – ಅವನ, ಅರುಳ್ – (ಸಂಶ್ಲೇಷಕ್ಕೆ) ಉಪಕಾರವನ್ನು, ಪೆಱುಮ್‌ಪೋದು–ಹೊಂದುವಕಾಲವು, ಅರಿದು–ದುರ್ಲಭವಾಗಿದೆ. ಅವ್ವರುಳಲ್ಲನ– ಆ ಉಪಕಾರವಲ್ಲದೆ ಬೇರೆಕಾರಣಗಳು, ಅರುಳುಮಲ್ಲ – ಉಪಕಾರಗಳೇ ಅಲ್ಲ. ಅವನ್ ಅರುಳ್–ಅವನ ಉಪಕಾರವನ್ನು, ಪೆಱುಮ್ ಅಳವು – ಲಭಿಸುವವರೆಗೂ, ಆವಿ–ಪ್ರಾಣವು, ನಿಲ್ಲಾದು–ನಿಲ್ಲಲಾರದು. ಮಾಲ್ಯೆಯುಮ್–ಸನ್ಧ್ಯಾಕಾಲವೂ, ಅಡುಪಕಲ್–ನಾಶವನ್ನು ಹೊಂದುವ ಹಗಲುಳ್ಳದುದು. ನೆಞ್ಜುಮ್–ಮನಸ್ಸೂ, ಕಾಣೇನ್– ಸಹಾಯವಾಗಿ ತೋರುವುದಿಲ್ಲ. ಶಿವನೊಡು–ರುದ್ರನೊಂದಿಗೆ, ಪಿರಮನೊಡು–ಬ್ರಹ್ಮನೊಂದಿಗೆ, ವಣ್ – ಸಮಸ್ತ ಕಲ್ಯಾಣಗುಣಭರಿತೆಯಾದ, ತಿರು – ಲಕ್ಷ್ಮೀದೇವಿಯಾದ, ಮಡನ್ದೈ–ಸ್ತ್ರೀರತ್ನವೂ, ಶೇರ್–ಆಶ್ರಯಿಸುವಂತಹ, ತಿರು ಆಕಮ್–ಶೀಲಸಮೃದ್ಧಿಶಿಷ್ಟನಾದ ಶ್ರೀ ಭಗವನ್ತನ ಮೂರ್ತಿಯು, ಎಮ್ ಆವಿ– ನಮ್ಮ ಪ್ರಾಣವನ್ನು, ಈರುಮ್–ಕೊಲ್ಲುತ್ತಿದೆ. ಇನಿ – ಹೀಗಿರುವಲ್ಲಿ. ಪುಕುಮ್ ಇಡಮ್–ಆಶ್ರಯಿಸಲು ಸ್ಥಾನವು, ಎವನ್–(ನಮಗೆ) ಯಾವುದು?. ಎವನ್ ಶೆಯ್‌ಕೇನೋ–ನಾನು ಯಾವ ಉಪಕಾರವನ್ನು ಮಾಡಬಲ್ಲೆನು? ಅನ್ನೈಮೀರ್ ಕಾಳ್–ಜನನಿಯರೇ!, ಆರುಕ್ಕು–ಯಾರಿಗೆ, ಎನ್ ಶೊಲ್ಲುಕೇನ್–ಏನು ಹೇಳಲಿ?

( ಸ-ಗಾ-ರ ॥ )—

ದುಷ್ಪ್ರಾಪೋ ಮೇಽದ್ಯ ತತ್ಸಙ್ಗಮಸಮಯ ಇಹ! ಶ್ರೀಹರೇಸ್ತಸ್ಯ ವಿಷ್ಣೋಃ
ಕಾರುಣ್ಯಂ ತದ್ವಿನಾ ಮೇ ನ ಹಿ ಭುವಿ ತು ಭವೇಜ್ಜೀವಿತಂ! ಚಾದ್ಯ ಸನ್ಧ್ಯಾ!
ಚಿತ್ತಂ ಮೇ ನಾನುಕೂಲಂ! ವಿಧಿಶಿವಸಹಿತಾ ಸಾಽಪಿ ಲಕ್ಷ್ಮೀಸ್ತನುಂ ಚ
ಪ್ರಾಪ್ತೇತ್ಯಸ್ಯೇತಿ ನಾಹಂ ಬತ! ಶರಣಮಹೋ! ಪ್ರಾಪ್ನುಯಾಂ !
ಕಿನ್ನು ಕುರ್ಯಾಮ್ ? ॥

ತಾ|| ಅವನ ಸಂಶ್ಲೇಷಕ್ಕೆ ಉಪಕಾರಕವಾದ ಅವನ ಕೃಪೆಯನ್ನು ಹೊಂದುವ ಸಮಯವು ದುರ್ಲಭವಾಗಿದೆ. ಆ ಉಪಕಾರವಲ್ಲದೆ ಬೇರೆ ಕಾರಣಗಳು ಉಪಕಾರಗಳೇ ಅಲ್ಲ. ಅವನ ಉಪಕಾರವನ್ನು ಲಭಿಸುವವರೆಗೂ ನನ್ನ ಪ್ರಾಣವು ನಿಲ್ಲಲಾರದು. ಸನ್ಧ್ಯಾಕಾಲವೂ ಹಗಲನ್ನು ನಾಶಪಡಿಸುತ್ತಿದೆ. ಮನಸ್ಸೂ ನನಗೆ ಸಹಾಯವಾಗಿ ತೋರುವುದಿಲ್ಲ. ಬ್ರಹ್ಮರುದ್ರಾದಿಗಳಿಂದಲೂ ಲಕ್ಷ್ಮೀದೇವಿಯಿಂದಲೂ ಆಶ್ರಯಿಸಲ್ಪಟ್ಟ, ಶೀಲಸಮ್ಪದ್ವಿಶಿಷ್ಟನಾದ ಶ್ರೀ ಭಗವನ್ತನ ದಿವ್ಯಮೂರ್ತಿಯು ನಮ್ಮ ಪ್ರಾಣವನ್ನು ಹೀರುತ್ತಿದೆ. ಹೀಗಿರುವಲ್ಲಿ ಆಶ್ರಯಿಸಲು ನನಗೆ ಸ್ಥಾನವು ಯಾವುದೋ? ನಾನು ಯಾವ ಉಪಕಾರವನ್ನು ಮಾಡಬಲ್ಲೆನು? ಜನನಿಯರೇ! ನಾನು ಯಾರಿಗೆ ಏನುಹೇಳಲಿ?

(೭) ಆರುಕ್ಕೆನ್ ಶೊಲ್ಲುಕೇನನ್ನೈಮಿರಾರ್ ಕಾಳಾರುಯಿರಳವನ್ಡ್ರಿ
ಕ್ಕೂರ್ ತಣ್ ವಾಡೈ,
ಕಾರೊಕ್ಕುಮೇನಿ ನಮ್ ಕಣ್ಣನ್ ಕಳ್ವಮ್
ಕವರ್ನ್ದವತ್ತನಿನೆಞ್ಜಮವರ್ ಕಣ್ ಅ಼ದೇ,
ಶೀರುಱ್ಱ ವಹಿಱ್ಪುಕೈ ಯಾೞ್ನರಮ್ಬು ಪಞ್ಜಮಮ್
ತಣ್ ಪಶುಮ್ ಶಾನ್ದಣೈನ್ದು,
ಪೋರುಱ್ಱ ವಾಡೈ ತಣ್ ಮಲ್ಲಿಕೈ ಪ್ಪೂಪ್ಪುದುಮಣ-
ಮುಕನ್ದುಕೊಣ್ಡೆಱಿಯುಮಾಲೋ!

ಪ್ರ|| ಕಾರ್ ಒಕ್ಕುಮ್ – ಕಾಳಮೇಘಸದೃಶವಾದ, ಮೇನಿ – ಶರೀರದ ಕಾನ್ತಿಯುಳ್ಳ, ನಮ್ ಕಣ್ಣನ್–ನಮ್ಮ ಕೃಷ್ಣನು, ಕಳ್ವಮ್–ವಞ್ಚನೆಯಿಂದ, ಕವರ್ನ್ದ–ಅಪಹರಿಸಿದ, ಅತ್ತನಿ ನೆಞ್ಜಮ್–ನಮ್ಮನ್ನು ಬಿಟ್ಟುಹೋದ ಆ ಮನಸ್ಸು, ಅವರ್ ಕಣ್ ಅ಼ದು–ಅವನ ಸಮೀಪದಲ್ಲಿ ಹೋಗಿ ಸೇರಿದೆ. (ಈ ಸಮಯದಲ್ಲಿ) ಶೀರ್ ಉಱ್ಱ ಪರಿಮಳವಿಶಿಷ್ಟವಾದ, ಅಹಿಱ್ಪುಕೈ–ಅಗಿಲುಗನ್ಧದ ಹೊಗೆಯನ್ನೂ, ಯಾೞ್ನರಮ್ಬು – ವೀಣೆಯತಂತಿಯ ಧ್ವನಿಯನ್ನೂ, ಪಞ್ಜಮಮ್ – ಪಞ್ಚಮ ಸ್ವರವನ್ನೂ, ತಣ್ ಪಶುಮ್ ಶಾನ್ದು – ಶೀತಳವಾದ ಆರ್ದ್ರಚನ್ದನವನ್ನೂ, ಅಣೈನ್ದು–ಚೆನ್ನಾಗಿ ಸ್ವೀಕರಿಸಿ ತೆಗೆದುಕೊಣ್ಡು, ಪೋರುಱ್ಱ–ಯುದ್ಧೋನ್ಮುಖವಾದ, ವಾಡೈ–ಗಾಳಿಯು, ತಣ್–ಶೀತಳವಾದ, ಮಲ್ಲಿಕೈಪ್ಪೂ–ಮಲ್ಲಿಗೆಹೂವಿನ, ಪುದುಮಣಮ್–ನವನವಪರಿಮಳವನ್ನೂ, ಮುಕನ್ದುಕೊಣ್ಡು–ತುಂಬಿಕೊಂಡುಬಂದು, ಎಱಿಯುಮಾಲೋ–ಬೀಸುತ್ತಿದೆ. ಇಕ್ಕಾರ್ – ಈ ಸಾಮಗ್ರಿಗಳೊಡನೆ ಸೇರಿದ,

ತಣ್ವಾಡೈ-ಶೀತಳವಾದ ಗಾಳಿಯು, ಆರುಯಿರಳವನ್ರು – ನನ್ನ ಆತ್ಮವಸ್ತುವಿನ ಪರಿಮಾಣವುಳ್ಳದುದಲ್ಲ. ಅನ್ನೈಮಿರ್ಕಾಳ್-ಜನನಿಯರೇ, ಆರುಕ್ಕು-ಯಾರಿಗೆ, ಎ್ ಶೊಲ್ಲುಕೇ-ಏನು ಹೇಳುವೆನು ?

( ಸ-ಗಾ-ರ )—

ನೀಲಾಮ್ಭೋದಾಭಮೂರ್ತಿಂ ನನು ಮಮ ಹೃದಯಂ
ಕೃಷ್ಣಮೇವಾಶ್ರಿತಂ ತ-
ನ್ಮಾಯಾವಶ್ಯಂ! ಸುಗನ್ಧಸ್ವರಸಮಧುರಗೀತಾದಿಭಿರ್ವಾತಿ ವಾತಃ |
ನಾನಾಮಲ್ಲೀಸುಮಾದ್ಯೈಃ ಪರಿಮಳಭರಿತೋ ಹನ್ತ! ವಾತೋಽಯಮೇವಂ
ಮರ್ಮಸ್ಪರ್ಶೀ ತುದೇನ್ಮಾಂ ! ಕಥಮಹಹ! ಜನನ್ಯೋಽದ್ಯ ಮೇ ವಚ್ಮಿ
ವೃತ್ತಮ್ ||

ತಾ|| ಕಾಳಮೇಘವರ್ಣನಾದ ನಮ್ಮ ಕೃಷ್ಣನು ವಞ್ಚನೆಮಾಡಿ ಅಪಹರಿಸಿದ ನಮ್ಮ ಮನಸ್ಸು ಅವನಲ್ಲಿ ಹೋಗಿಸೇರಿದೆ. ಇಂತಹ ಸಮಯದಲ್ಲಿ ಪರಿಮಳ ಭರಿತವಾದ ಗನ್ಧದಹೊಗೆಯನ್ನೂ ವೀಣೆಯ ತಂತಿಯಧ್ವನಿಯನ್ನೂ, ಪಞ್ಚಮ ಸ್ವರವನ್ನೂ, ಶೀತಳವಾದ ಚನ್ದನವನ್ನೂ ಸ್ವೀಕರಿಸಿ ತೆಗೆದುಕೊಂಡು ಬಂದು ಯುದ್ಧೋನ್ಮುಖವಾದ ಪ್ರಬಲವಾದ ಗಾಳಿಯು ನಮಗೆ ಪ್ರತಿಕೂಲವಾಗಿ ನವನವ ಮಲ್ಲಿಕಾ ಸೌರಭದೊಡನೆ ಬಂದು ಬೀಸಿ ಹೊಡೆಯುತ್ತಿದೆ. ಈ ಸಾಮಗ್ರಿಗಳೊಡನೆ ಕೂಡಿದ ಗಾಳಿಯು ನನ್ನ ಆತ್ಮವಸ್ತುವಿಗೆ ಸಹ್ಯವಾಗಿಲ್ಲ. ಜನನಿಯರೇ! ನಾನು ಯಾರಿಗೆ ಏನು ಹೇಳಬಲ್ಲೆನು ?

(೮) ಪುದುಮಣಮುಕನ್ದುಕೊಣ್ಡೆಙಿಯುಮಾಲೋ !
ಪೊಙ್ಗಿಳವಾಡೈ ಪುಣ್ಶೆಕ್ಕರಾಲೋ !
ಅದು ಮಣನ್ದಕನ್ನಪ್ಪಿನ್ಣಾ ಕಳ್ವಮ್ ಕಣ್ಣನಿಲ್
ಕೊಡಿದಿನಿ ಯದನಿಲುಮ್ಬರ್,
ಮದುಮಣಮಲ್ಲಿಕೈ ಮನ್ದಕ್ಕೋವೈ ವಣ್ಪಞ್ಚಮ್—
ಶಾನ್ದಿನಿಲ್ ಪಞ್ಚಮಮ್ ವೈತ್ತು
ಅದುಮಣನ್ದಿನ್ನರುಳಾಯ್ಚ್ಚಿಯಾರ್ಕ್ಕೇ
ಯೂದುಮತ್ತೀಙ್ಕುಱ್ತೆ ಯುಯ್ಯೇನಾೞ್.

ಪ್ರ|| ಪೊಙ್ಗು-ಮೇಲಕ್ಕೆ ವ್ಯಾಪಿಸಿ, ಇಳ-ಪ್ರವರ್ಧಮಾನವಾದ, ವಾಡೈ-ಗಾಳಿಯು, ಪುದುಮಣಮ್-ಅಭಿನವಪರಿಮಳವನ್ನು, ಮುಕನ್ದುಕೊಣ್ಡು-ತುಂಬಿಕೊಂಡುಬಂದು, ಎತ್ತಿಯುಮ್-ಬೀಸುತ್ತಿದೆ. (ಸಂಧ್ಯಾಕಾಲವು ಅತಿಕ್ರಮಿಸಿ) ಪುಣ್-ತೀವ್ರವಾದ, ಶೆಕ್ಕರ್-ಸನ್ಧ್ಯಾರಾಗವು ವ್ಯಾಪಿಸುತ್ತಿದೆ. ಅದು ಮಣನ್ದು-ಅದು ಹಾಗೆಯೇ ಕೂಡಿ, ಅಕನ್ರ-ಹೊರಟುಹೋಯಿತು. ನಮ್ಕಣ್ಣನ್-ನಮ್ಮ ಕೃಷ್ಣನ, ಕಳ್ಳಮ್-ವಞ್ಚನೆಯು, ಕಣ್ಣನಿಲ್-ಕೃಷ್ಣನಿಗಿಂತ, ಕೊಡಿದು-ತೀವ್ರವಾಗಿ ಇದೆ. ಇನಿ-ಇನ್ನೂ, ಅದನಿಲುಮ್ಬರ್ - ಅದಕ್ಕೆಮೇಲೇ, ಮದುಮಣಮಲ್ಲಿಕೈ - ಮಧುಸೌರಭಗಳಿಂದ ಕೂಡಿದ ಮಲ್ಲಿಗೆಯ, ಮನ್ದಕ್ಕೋವೈ-ರಮ್ಯವಾದ ಮಾಲೆಗಿಂತಲೂ, ವಣ್ಪಶುಮ್ ಶಾನ್ದಿನಿಲ್ - ಒಳ್ಳೇ ಆರ್ದ್ರಚನ್ದನಕ್ಕಿಂತಲೂ, ಪಞ್ಚಮಮ್-ರಮ್ಯವಾದ ಪಞ್ಚಮಸ್ವರವನ್ನು, ವೈತ್ತು-ಇಟ್ಟು, ಅದುಮಣನ್ದು-ಆ ಸಂಶ್ಲೇಷವನ್ನು ಮಾಡಿ, ಇನ್ ಅರುಳ್-ಭೋಗ್ಯವಾದ ಕೃಪೆಗೆ ಪಾತ್ರರಾದ, ಆಯ್ಚ್ಚಿಯರ್ಕ್ಕೇ-ಗೋಪಿಗಳಿಗೇ, ಊದುಮ್-ಊದುವ, ಅತ್ತೀಙ್ಕುಳಲ್ಕ್ಕೇ-ಆ ರಮ್ಯವಾದ ಕೊಳಲಿನ ಧ್ವನಿಗೇ, ನಾನ್-ನಾನು, ಉಯ್ಯೇನ್-ಬದುಕಲಾರೆನು.

( ಸ-ಗಾ-ರ || )—

ವಾತೋಽಯಂ ದಿವ್ಯಗನ್ಧೋ ನವನವವಿಭವೋ ವಾತಿ! ಸನ್ಧ್ಯಾ ಚ ರಕ್ತಾ
ತೀವ್ರಾ ಹಾ! ಹನ್ತ! ಕೃಷ್ಣಃ ಕುಟಿಲಗತಿರಹೋ! ತಸ್ಯ ಮಾಯಾಽತಿತೀವ್ರಾ|
ಸೌರಭ್ಯೋಪೇತಮಲ್ಲೀಪರಿಮಳವಿಸರಚ್ಛನ್ನನಾಽಚ್ಛಾಪಿ ವೇಣೋ-
ರ್ನಾದೋಽಯಂ ಪಞ್ಚಮಸ್ಥಃ ಕಿಲ ಮಮ ಸಪದಿ
ಪ್ರಾಣಸ್ಪೃದ್ಯೋಪಿಕಾಜಿತ್ ||

ತಾ|| ಮೇಲಕ್ಕೆ ವ್ಯಾಪಿಸಿ ಪ್ರವರ್ಧಮಾನವಾದ ಗಾಳಿಯು ಅಭಿನವ ಪರಿಮಳವನ್ನು ತುಂಬಿಕೊಂಡು ಬಂದು ಬೀಸುತ್ತಿದೆ. ಸನ್ಧ್ಯಾಕಾಲವು ಅತಿಕ್ರಮಿಸಿ, ತೀವ್ರವಾದ ಸನ್ಧ್ಯಾರಾಗವು ವ್ಯಾಪಿಸುತ್ತಿದೆ. ಅದೂ ಸೇರಿ ಕ್ರಮೇಣ ಹೊರಟುಹೋಯಿತು. ನಮ್ಮ ಕೃಷ್ಣನ ವಞ್ಚನೆಯೋ ಅವನಿಗಿಂತ ತೀವ್ರವಾಗಿದೆ. ಇದೂ ಅಲ್ಲದೆ ಮಧುಸೌರಭಭರಿತವಾದ ಮಲ್ಲಿಗೆಯಮಾಲೆಗಿಂತಲೂ ಒಳ್ಳೇ ಆರ್ದ್ರಚನ್ದನಕ್ಕಿಂತಲೂ ರಮ್ಯವಾದ ಪಞ್ಚಮಸ್ವರವನ್ನು ಇಟ್ಟು ಸಂಶ್ಲೇಷಮಾಡಿದ ಅವನ ಕೃಪೆಗೆ ಪಾತ್ರರಾದ ಗೋಪಿಯರಿಗೇ ಅವನು ಊದುವ ಕೊಳಲಿನ ರಮ್ಯವಾದ ಧ್ವನಿಯನ್ನು ಕೇಳಿ ನಾನು ಬದುಕಲೇ ಆರೆನು.

(೯) ಊದುಮತ್ತೀಙ್ಕುೞಱ್ಕೇ ಯುಯ್ಯೇನ್ ನಾನದು
ಮೊೞಿನ್ದಿಡೈಯಿಡೈತ್ತನ್, ಶೆಯ್‌ಕೋಲ
ತ್ತೂದುಶೆಯ್ ಕಣ್‌ಕಳ್‌ಕೊಣ್ಡೊನ್ಱುಪೇಶಿ
ತ್ತೂಮೊೞಿಯಿಶೈಕಳ್ ಕೊಣ್ಡೊನ್ಱುನೋಕ್ಕಿ,
ಪೇದುಱುಮುಕಮ್‌ಶೆಯ್‌ದು ನೊನ್ದುನೊನ್ದು
ಪೇದೈನೆಞ್ಜಱವಱ ಪ್ಪಾಡುಮ್‌ಪಾಟ್ಟೈ,
ಯಾದುಮೊನ್ಱಱಿಕಿಲಮಮ್ಮವಮ್ಮ ಮಾಲೈಯುಮ್ ವನ್ದದು
ಮಾಯನ್ ವಾರಾನ್.

ಪ್ರ॥ ಇಡೈಯಿಡೈ-ಮಧ್ಯಮಧ್ಯದಲ್ಲಿ, ಅದು – ನೈಚ್ಯಸೂಚಕವಾದ ಗೀತಗಳನ್ನು, ಮೊೞಿನ್ದು-ಹೇಳಿ, ಊದುಮ್-ಊದುವ, ಅತ್ತೀಮ್‌ಕುೞಱ್ಕೇ-ಆ ಭೋಗ್ಯವಾದ ಕೊಳಲಿನ ಶಬ್ದಕ್ಕೇ, ನಾನ್-ನಾನು, ಉಯ್ಯೇನ್-ಜೀವಿಸಲಾರೆನು. ತನ್-ತನಗೆತಾನೇ, ಶೆಯ್-ಮಾಡಲ್ಪಟ್ಟ, ಕೋಲಮ್ ಅಲಂಕಾರವುಳ್ಳ, ತೂದುಶೆಯ್-ದೂತಕೃತ್ಯವನ್ನು ಮಾಡುವ, ಕಣ್‌ಕಳ್‌ಕೊಣ್ಡು-ಕಣ್ಣುಗಳನ್ನು ವಹಿಸಿ, ಒನ್ಱುಪೇಶಿ-ಸ್ವಾಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿ, ತೂಮೊೞಿ-ಪರಿಶುದ್ಧವಾದ ಸೂಕ್ತಿಗಳುಳ್ಳ, ಇಶೈಕಳ್‌ಕೊಣ್ಡು-ಗಾನಗಳನ್ನು ಅಂಗೀಕರಿಸಿ, ಒನ್ಱು ನೋಕ್ಕಿ-ಸ್ವಾಪೇಕ್ಷಿತವಸ್ತುಗಳನ್ನು ನೋಡಿ, ಪೇದುಱುಮುಕಮ್‌ಶೆಯ್‌ದು – ತನ್ನ ರಸಿಕತೆಯು ತನ್ನ ಮುಖಭಾವದಲ್ಲಿ ತೋರುವಂತೆ ಮಾಡಿ, ನೊನ್ದುನೊನ್ದು-ಮೇಲೆಮೇಲೆ ಖಿನ್ನತೆಯಿಂದ, ಪೇದೈ – ಮುಗ್ಧೆಗಳಾದ ಸ್ತ್ರೀಯರ, ನೆಞ್ಜು-ಮನಸ್ಸು, ಅಱವು-ಕ್ಲೇಶದಿಂದ ಕೂಡಿದ ವಿಶ್ಲೇಷವೂ, ಅಱ-ನಾಶಹೊಂದುವಂತೆ, ಪಾಡುಮ್ ಪಾಟ್ಟೈ – ಅನುಭವಿಸುವ ಕ್ಲೇಶವನ್ನು, ಯಾದುಮೊನ್ಱು – ಯಾವ ಪ್ರಕಾರದಲ್ಲೂ, ಅಱಿಕಿಲಮ್-ನಾವು ತಿಳಿಯಲಾರೆವು. ಅಮ್ಮ ಅಮ್ಮ-ಅಯ್ಯೋ! ಅಯ್ಯೋ!, ಮಾಲೈಯುಮ್ ವನ್ದದು - ರಾತ್ರಿಯು ಬಂದುಬಿಟ್ಟಿತು. ಮಾಯನ್ – ಆಶ್ಚರ್ಯಚೇಷ್ಟಿತನಾದ ಸ್ವಾಮಿಯು, ವಾರಾನ್- ಇನ್ನೂ ಬರುವುದಿಲ್ಲ. (ಏನುಮಾಡೋಣ?)

( ಸ-ಗಾ-ರ || )—

ಮಧ್ಯೇ ಮಧ್ಯೇ ಮನೋಹಾರ್ಯಭಿನವಭಣಿತೈರ್ವೇಣುನಾದೈರ್ಗತಾಸು-
ಶ್ಚಾಹಂ ಹಾ ! ಹನ್ತ ! ವೀಕ್ಷಾಮಪಿ ರುಚಿರತಮಾಂ ಸೂಕ್ತಿಸಜ್ಜೀತ-
ಮಾಲಾಮ್ |
ಕಾನ್ತಾಚಿತ್ತಾಭಿರಾಮಾಮಹಹ! ನ ಹಿ ಪರಾಂ ವೇದ್ಮಿ ವಾಚಾಽಪಿ ವಕ್ತುಂ
ಚೇಷ್ಟಾಂ ತಸ್ಯಾದ್ಯ ರಾತ್ರಿರ್ಭವತಿ! ಬತ! ನ ಮಾಂ ಕಾನ್ತ-ಆಯಾತಿ
ಮಾಯೀ||

ತಾ|| ಮಧ್ಯಮಧ್ಯದಲ್ಲಿ ನೈಚ್ಯಸೂಚಕವಾದ ಮನೋಹಾರಿ ಗೀತಗಳನ್ನು ಸೇರಿಸಿ ಊದುವ ಆ ಭೋಗ್ಯವಾದ ಕೊಳಲಿನ ಧ್ವನಿಗೆ ನಾನು ಬದುಕಲೇ ಆರೆನು. ಅವನ ದಿವ್ಯಾಲಂಕಾರಸಹಿತವಾದ ವೀಕ್ಷಾಕಟಾಕ್ಷಗಳೊಡನೆ ಕೂಡಿದ ರಸಿಕತಮವಾದ ಮುಖಭಾವವು ಚಿನ್ನೆಗಳಾದ ಮುಗ್ಧೆಯರಾದ ಅಬಲಾಜನರ ಮನಸ್ಸನ್ನು ಕ್ಲೇಶಪಡಿಸುವ ಪ್ರಕಾರವನ್ನು ವರ್ಣಿಸಲಾರೆವು. ಅಯ್ಯೋ ! ಅಯ್ಯೋ ! ರಾತ್ರಿಯು ಬಂದುಬಿಟ್ಟಿತು. ಮಾಯಾಚೇಷ್ಟಿತನಾದ ಕೃಷ್ಣನು ಬರುವುದಿಲ್ಲ. ಏನುಮಾಡೋಣ ?

(೧೦) ಮಾಲೈಯುಮ್ ವನ್ದದು ಮಾಯನ್ ವಾರಾನ್ ಮಾಮಣಿ
ಪುಲಮ್ಬವಲ್ಲೇಱ್ಣೈನ್ದ,
ಕೋಲನನ್ನಾಕಳುಕಳುಮಾಲೋ ಕೊಡಿಯನ
ಕುೞಲ್‌ಕಳುಮ್ ಕುೞುಮಾಲೋ,
ವಾಲೊಳಿವಳರ್ ಮುಲ್ಲೈಕ್ಕರುಮುಕೈಕಳ್
ಮೆಲ್ಲಿಕ್ಕೈಯಲಮ್ಬಿವನ್ನಾಲುಮಾಲೋ,
ವೇಲೈಯುಮ್ ವಿಶುಮ್ಬಿಲ್ ವಿಣ್ಡಲಱುಮಾಲೋ!
ಎನ್‌ಶೊಲ್ಲಿ ಯುಯಿರ್‌ಕ್ಕಿನ್ನಿಙ್ಗುವನ್ನವಿಟ್ಟೇ.

ಪ್ರ|| ಮಾಲೈಯುಮ್ ವನ್ದದು-ರಾತ್ರಿಯೂ ಬಂತು, ಮಾಯರ್‌ವಾರಾನ್- ಆಶ್ಚರ್ಯಕರನಾದ ಅವನು ಇನ್ನೂ ಬರಲಿಲ್ಲ. ಮಾಮಣಿ-ದೊಡ್ಡದೊಡ್ಡ ಘಂಟಿಗಳು, ಪುಲಮ್ಬ-ಧ್ವನಿಸುವಂತೆ, ವಲ್ ಏಱು - ಬಲಿಷ್ಠವಾದ ವೃಷಭಗಳನ್ನು,

ಅಣೈನ್ದ - ಸೇರಿಕೊಂಡಿರುವ, ಕೋಲಮ್-ಸುನ್ದರವಾದ, ನಲ್ - ರಮ್ಯವಾದ ಭೋಗ್ಯತೆಯುಳ್ಳ, ನಾಕುಕಳ್ - ಪಶುಗಳು, ಉಕಳುಮ್ - ಸಂಭ್ರಮದೊಡನೆ ಸಂಚರಿಸುತ್ತಿವೆ. ಕುೞಲ್‌ಕಳುಮ್-ಕೊಳಲುಗಳೂ, ಕೊಡಿಯನ-ಸಹಿಸಲಾರದ ಹಾಗೆ, ಕುೞಱುಮ್-ಅಸ್ಪಷ್ಟವಾಗಿ ಧ್ವನಿಮಾಡುತ್ತಿವೆ. ವಾಲ್ ಒಳಿ-ಶುಭ್ರ ವಾದ ಪ್ರಕಾಶವುಳ್ಳ, ವಳರ್-ಬೆಳೆಯುತ್ತಿರುವ, ಮುಲ್ಲೈ-ಮೊಲ್ಲೆಲತೆಗಳನ್ನೂ, ಕರುಮುಕೈ-ಕರುಮುಕ್ಕೆ ಪುಷ್ಪಲತೆಗಳನ್ನೂ, ಮಲ್ಲಿಕೈಕಳ್-ಮಲ್ಲಿಗೆ ಬಳ್ಳಿಗಳನ್ನೂ, ಅಲಮ್ಬಿ-ಆಶ್ರಯಿಸಿ, ವಣ್ಡು - ಭ್ರಮರಗಳು, ಅಲುಮ್-ಶಬ್ದಮಾಡುತ್ತಿವೆ. ವೇಲೈಯುಮ್-ಸಮುದ್ರವೂ, ವಿಶುಮ್ಬಿಲ್-ಆಕಾಶದಲ್ಲಿ, ವಿಣ್ಡು ಅಲಱುಮ್-ಸವ್ಯಾಪಿಸಿ ಬಾಯಿಬಿಟ್ಟು ಕೂಗುತ್ತಿದೆ. ಇಬ್ಬ-ಈ ಅವಸ್ಥೆಯಲ್ಲಿ, ಅವನೈ ವಿಟ್ಟೇ-ಅವನನ್ನು ಬಿಟ್ಟು, ಎ಼ ಶೊಲ್ಲಿ-ಏನು ಹೇಳಿ, ಉಯ್‌ವ಼-ಜೀವಿಸುವೆನು ?

( ಸ-ಗಾ-ರ || )—

ಆಯಾತೈವ ನಿಶಾಽಧುನಾ ನ ತು ಹರಿರ್ಮಾಯೀ ಸಮಾಯಾತ್ಯಹೋ!
ಗಾವಶ್ಚಾಪಿ ವೃಕ್ಷೈಶ್ಚರನ್ತಿ ಸಹಿತಾ ಲೀಲಾವಿಲಾಸಾಕುಲಾಃ |
ಶ್ರೂಯನ್ತೇ ಬಹುಧಾ ಚ ವೇಣುನಿನದಾ ದೀಪ್ರಾ ಲತಾಪ್ರಷ್ಟಪೃದ್ಭಿ-
ರ್ಮಲ್ಲ್ಯಾದ್ಯಾ ಜಲಧಿಶ್ಚ ಖೇಚರರವೋ ! ಜೀವಾಮಿ ಕಿಂ ತಂ ವಿನಾ ? ||

ತಾ|| ರಾತ್ರಿಯು ಬಂದುಬಿಟ್ಟಿತು, ಮಾಯಾಚೇಷ್ಟಿತನಾದ ಅವನೋ ಇನ್ನೂ ಬರಲೇ ಇಲ್ಲ. ಘಂಟಾನಾದಗಳೊಡನೆ ಕೂಡಿದ ವೃಷಭಗಳೊಡನೆ ಸೇರಿಕೊಂಡು ಸುನ್ದರವಾದ ಪಶುಗಳು ಸಂಭ್ರಮದೊಡನೆ ಮನೆಯಕಡೆಗೆ ಸಂಚರಿಸುತ್ತಿವೆ. ಕೊಳಲುಗಳೂ ನಮಗೆ ಸಹಿಸಲಾರದಹಾಗೆ ಅಸ್ಪಷ್ಟವಾಗಿ ಧ್ವನಿಮಾಡುತ್ತಿವೆ. ಶುಭ್ರವಾಗಿ ಪ್ರಕಾಶಿಸುವ ಮೊಲ್ಲೆ ಮಲ್ಲಿಗೆ ಮುಂತಾದ ಲತೆಗಳಲ್ಲಿ ಭ್ರಮರಗಳು ಪುಷ್ಪಗಳಲ್ಲಿ ಸೇರಿ ಶಬ್ದಮಾಡುತ್ತಿವೆ. ಸಮುದ್ರವೂ ಆಕಾಶದಲ್ಲಿ ವ್ಯಾಪಿಸಿ ಮೇಲಕ್ಕೆ ಎದ್ದು ಗರ್ಜಿಸುತ್ತಿದೆ. ನಾನು ಈ ಅವಸ್ಥೆಯಲ್ಲಿ ಅವನನ್ನು ಬಿಟ್ಟು ಹೇಗೆ ಬದುಕುವೆನು ?

(೧೧) ಅವನ್ನೈ ವಿಟ್ಟಕನ್ಱುಯಿರಾಱ್ಱಕಿಲ್ಲಾ ಅಣಿಯಿೞೈ
ಯಾಯ್‌ಚ್ಚಿಯರ್ ಮಾಲೈಪ್ಪೂಶಲ್,
ಅವನ್ನೈ ವಿಟ್ಟಕಲ್ವದಱ್ಕೇ ಯಿರಙ್ಗ್ ಯಣಿಕುರುಕೂರ್
ಚ್ಚಡಕೋಪನ್ ಮಾಱನ್,
ಅವನಿಯುಣ್ಡುಮಿೞ್ನ್ದವನ್ ಮೇಲುರೈತ್ತ
ವಾಯಿರತ್ತುಳ್ಳಿವೈಪತ್ತುಮ್ ಕೊಣ್ಡು,
ಅವನಿಯುಳಲಱ್ಱಿ ನಿನ್ಱುಯ್ಮಿನ್
ತೊಣ್ಡೀರಚ್ಚೊನ್ನಮಾಲೈ ನಣ್ಣಿತ್ತೊೞುದೇ.

ಪ್ರ॥ ಅವನ್ನೈವಿಟ್ಟು ಅಕನ್ಱು – ಅವನನ್ನು ಬಿಟ್ಟು ಅಗಲಿ, ಉಯಿರ್ ಆಱ್ಱಕಿಲ್ಲಾ–ಪ್ರಾಣಧಾರಣವಂ ಮಾಡಲಾರದೇ ಇರುವ, ಅಣಿ ಇೞೈ–ಅಲಂಕರಿಸಲ್ಪಟ್ಟ ಆಭರಣಗಳುಳ್ಳ, ಆಯ್‌ಚ್ಚಿಯರ್ – ಗೋಪೀಜನರು, ಮಾಲೈ–ಸಾಯಂಕಾಲದಲ್ಲಿ, ಪೂಶಲ್–ಮೊರೆಯಿಡುವ ಪ್ರಕಾರವನ್ನು ಹೇಳಿ, ಅವನ್ನೈ – ಅವನನ್ನು, ವಿಟ್ಟಕಲ್‌ವದಱ್ಕೇ – ಬಿಟ್ಟಿರುವ ನಿಮಿತ್ತವಾಗಿ, ಇರಙ್ಗಿ – ದುಃಖಪಟ್ಟು, ಅಣಿ ಕುರುಕೂರ್ – ರಮ್ಯವಾದ ಕುರುಕಾಪುರಿಯಲ್ಲಿ ವಾಸಮಾಡುವ, ಶಡಕೋಪನ್ ಮಾಱನ್–ನಮ್ಮಾೞ್ವಾರೆಂಬ ಶಠಾರಿಮುನಿಯು, ಅವನಿ–ಭೂಮಿಯನ್ನು, ಉಣ್ಡು–ಭಕ್ಷಿಸಿ, ಉಮಿೞ್ನ್ದವನ್‌ಮೇಲ್ – ಉಗಿದು ಪುನಸ್ಸೃಷ್ಟಿಮಾಡಿದ ಸ್ವಾಮಿಯನ್ನು ಕುರಿತು, ಉರೈತ್ತ – ರಚಿಸಿದ, ಆಯಿರತ್ತುಳ್ – ಸಹಸ್ರಪದ್ಯಮಾಲೆಯೊಳು, ಇವೈಪತ್ತುಮ್ ಕೊಣ್ಡು–ಈ ದಶಕವನ್ನು ಅಂಗೀಕರಿಸಿ, ಅವನಿಯುಳ್ – ಭೂಮಿಯಲ್ಲಿ, ಅಲಱ್ಱಿನಿನ್ಱು – ಪ್ರೀತಿಯಿಂದ ಕೂಗಿ ನಿಂತು, ತೊಣ್ಡೀರ್ – ಚಪಲರಾದ ಭಕ್ತರೇ!, ಅಚ್ಚೊನ್ನ – ಆ ಕೀರ್ತಿತನಾದ, ಮಾಲೈ – ಕೃಷ್ಣನನ್ನು, ನಣ್ಣಿ ತ್ತೊೞುದೇ–ಆಶ್ರಯಿಸಿ ಸೇವಿಸಿ, ಉಯ್‌ಮಿನ್–ಉಜ್ಜೀವಿಸಿರಿ.

( ಸ–ಗಾ–ರ ॥ )—

ತದ್ವಿಶ್ಲೇಷಸಹಾ ನ ಯೇ ನಿಶಿ ಭೃಶಂ ಗೋಪೀಜನಾಃ ಕೃಷ್ಣನ್ಯ–
ಸ್ತೇಷಾಮೇವ ಶರೀರಿರಪ್ಯಹಹ! ತದ್ವಿಶ್ಲೇಷದುಃಖಾಸಹಃ ।
ಸಾಹಸ್ರೇ ಪರಮಂ ಜಗೌ ಚ! ದಶಕಂ ಚೇದಂ ಪಠನ್ತೋ ಭುವಿ
ಪ್ರೀತ್ಯಾ ಭಕ್ತಜನಾಸ್ತಮೇವ ಶರಣಂ ಪ್ರಾಪ್ತಾಸ್ಸ್ಯು ಚೋಜ್ಜೀವಿತಾಃ॥

ತಾ॥ ಅವನನ್ನು ಬಿಟ್ಟು ಪ್ರಾಣಧಾರಣವಂ ಮಾಡಲಾರದೇ ಇರುವ ದಿವ್ಯಾಭರಣಾಲಂಕೃತೆಗಳಾದ ಗೋಪೀಜನರು ಸಾಯಂಕಾಲದಲ್ಲಿ ವಿಶ್ಲೇಷದಿಂದ ಮೊರೆ

ಯಿಡುವ ಪ್ರಕಾರವನ್ನು ವರ್ಣಿಸಿ, ಅವನನ್ನು ಸ್ತುತಿಸುವುದಕ್ಕಾಗಿ—ಅವನ ವಿಶ್ಲೇಷದಿಂದ ಸನ್ತಪ್ತರಾದ ಶ್ರೀ ಕುರುಕಾಪುರಿಯ ಶಠಾರಿಮುನಿಯು ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠಿಸಿ – ಭಕ್ತರೇ! ನೀವೆಲ್ಲರೂ ಅತ್ಯನ್ತ ಪ್ರೀತಿಯಿಂದ ಆ ಕೃಷ್ಣನನ್ನೇ ಭಜಿಸಿ ಉಜ್ಜೀವಿಸಿರಿ.

( ದ್ರ–ಉ–ಸಂ || )—

ಸ್ವಪ್ರಾಪ್ತಿಕಾಲಮವಿಭಾವಯತೀನ್ದಿರೇಶೇ
ಕೃಷ್ಣೇ ಗವಾಮವನಧರ್ಮಿಣಿ ಗೋಪಿಕಾನಾಮ್ |
ಸಾಯಂಸಮಾಗಮವಿಲಮ್ಬಿನಿ ಯೋಽವಸಾದ–
ಆಶೀತ್ಸ ಏವ ನವಮೇ ಸ್ಫುರಿತಶ್ಶಠಾರೇಃ ||

( ದ್ರ–ಉ–ತಾ–ರ || )—

ಪದ್ಮಾಕ್ಷತ್ವಪ್ರಸಿದ್ಧ್ಯಾ ಜಗದವನತಯಾ ಭವ್ಯತಾದ್ಯೈಶ್ಚ ಸಾರ–
ಗ್ರಾಹಿತ್ವಾದ್ವೇಣುನಾದೈರ್ಹೃಷಿತಜನತಯಾ ಸ್ವಾಙ್ಗದಾನಾದಜಾದೇಃ |
ಶ್ಯಾಮತ್ವಾದ್ಗವ್ಯಚೋರತ್ವತ ಉತ ಸರಸಸ್ಮೇರಚೇಷ್ಟತ್ವಭೂಮ್ನಾ
ನಃ ಕೂಟಸ್ಥೋಽತ್ರ ಸಿದ್ಧ್ಯನ್ಮುಖಸಮುಯತಯಾ ಖ್ಯಾಪಯಾಮಾಸ
ಕೃಷ್ಣಮ್ ||

(ಈ ನವಮದಶಕದ ಸಾರಾಂಶ—)

ಈ ಒಂಬತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯನ್ನು ಹೊಂದಿ ಶ್ರೀ ಭಗವನ್ತನ ದಿವ್ಯರೂಪ – ಶೀಲ – ವೃತ್ತಾದಿಗಳನ್ನು ಅನುಸನ್ಧಾನಮಾಡಿ, ಕ್ರಮೇಣ ಶ್ರೀಕೃಷ್ಣಾವತಾರದ ಕೊಳಲಿನ ಧ್ವನಿಗಳಿಗೆ ವಶ್ಯರಾದ ಗೋಪೀಜನರಂತೆ ವಿಶ್ಲೇಷದಿಂದ ಸನ್ತಪ್ತರಾಗಿ, ಮನ್ದಮಾರುತ–ಪಞ್ಚಮಸ್ವರ–ದಿವ್ಯಪರಿಮಳಭರಿತವಾದ ಚನ್ದನ–ಸನ್ಧ್ಯಾರಾಗ–ವೃಷಭ ಘಂಟಾನಾದ–ಸನ್ತಾಪಕರನಾದ ಚನ್ದ್ರ–ತಾಪಕರವಾದ ಪುಷ್ಪಶಯನ – ಪುಷ್ಪಶಯನಗಳಲ್ಲಿ ರಮಿಸುವ ಭ್ರಮರಸಮೂಹ–ದಿವ್ಯವೇಣುನಾದ–ದಿವ್ಯಪರಿಮಳಭರಿತವಾದ ಚಣ್ಡಮಾರುತ–ಶ್ರೀಕೃಷ್ಣ ವೀಕ್ಷಾಕಟಾಕ್ಷ – ರಸಿಕತಮ ಮುಖಭಾವಾದಿಗಳನ್ನು ಸ್ಮರಿಸಿ ಸ್ಮರಿಸಿ, "ಸನ್ಧ್ಯಾಕಾಲವು ಸಮೀಪಿಸಿದಾಗ್ಯೂ ಮಾಯಾಚೇಷ್ಟಿತನಾದ ಅವನು ಬರಲೇ ಇಲ್ಲ—ನಾನು ಹೇಗೆ ಬದುಕಲಿ?" ಎಂದು ಆರ್ತಸ್ವರದಿಂದ ನಾಯಿಕಾರೂಪವುಳ್ಳ ತಮ್ಮ ಮನೋಭಾವಗಳನ್ನೆಲ್ಲಾ ವಿಶದಪಡಿಸಿ, ಸರ್ವಚೇತೋಹರವಾದ ಆ ವೇಣುಗಾನದ ಮಹಿಮೆಯನ್ನೇ ಚೆನ್ನಾಗಿ ವರ್ಣಿಸಿ ಇರುತ್ತಾರೆ.

——:❖:——

ಶ್ರೀಃ

# ನವಮಶತಕದಲ್ಲಿ—ದಶಮದಶಕ.

(ಮಾಲ್ೖನಣ್ಣಿ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಿರುಕ್ಕಣ್ಣಪುರವೆಂಬ ಶ್ರೀ ಕಣ್ವಪುರಾಖ್ಯ ದಿವ್ಯದೇಶದ ಸ್ವಾಮಿಯನ್ನು ಸ್ತುತಿಸಿ ಮಂಗಳಾಶಾಸನ ಮಾಡುತ್ತಾರೆ.)

[ಈ ದಿವ್ಯದೇಶವನ್ನು ಕಣ್ವಪುರವೆಂತಲೂ ಹೇಳುತ್ತಾರೆ; ಕೃಷ್ಣಪುರವೆಂತಲೂ ಹೇಳುತ್ತಾರೆ.]

---

(೧) ಮಾಲ್ೖನಣ್ಣಿ ತ್ತೊಳುದೆೞುಮಿನೋ ಪಿನ್ೖಕೆಡ,
ಕಾಲ್ೖಮಾಲ್ೖ ಕಮಲಮಲರಿಟ್ಟು ನೀರ್,
ವೇಲ್ೖಮೋದುಮ್ ಮದಿಳ್‌ಶೂೞ್ ತಿರುಕ್ಕಣ್ಣಪುರತ್ತು
ಆಲಿನ್ಮೇಲಾಲಮರ್‌ನ್ದಾನಡಿಯಿಣ್ೖಕಳೇ.

ಪ್ರ॥ ವೇಲ್ೖ–ಸಮುದ್ರದಿಂದ, ಮೋದುಮ್–ಹೊಡೆಯಲ್ಪಟ್ಟ, ಮದಿಳ್–ಪ್ರಾಕಾರದಿಂದ, ಶೂೞ್–ಪರಿವೃತವಾದ, ತಿರುಕ್ಕಣ್ಣಪುರತ್ತು–ಶ್ರೀ ಕಣ್ವಪುರದಲ್ಲಿ ವಾಸಮಾಡುತ್ತಿರುವ, ಆಲಿನ್‌ಮೇಲ್ ಅಮರ್‌ನ್ದಾನ್ – ವಟಪತ್ರಶಾಯಿಯಾದ ಸ್ವಾಮಿಯ, ಅಡಿ ಇಣ್ೖಕಳ್ – ಪಾದಯುಗಳದ ವಿಷಯದಲ್ಲಿ, ಮಾಲ್ೖ–ಪ್ರೇಮಾತಿಶಯವನ್ನು, ನಣ್ಣಿ–ಹೊಂದಿ, ಕಾಲ್ೖಮಾಲ್ೖ–ಅಹೋರಾತ್ರಗಳಲ್ಲಿ, ಕಮಲಮಲರ್–ತಾವರೆಪುಷ್ಪಗಳನ್ನು, ಇಟ್ಟು–ಸಮರ್ಪಿಸಿ, ನೀರ್ – ನೀವು, ಪಿನ್ೖ – ಕ್ಲೇಶವು, ಕೆಡ – ನಷ್ಟವಾಗುವಂತೆ, ತೊೞುದು ಎೞುಮಿನೋ – ಕೈಂಕರ್ಯವಂಮಾಡಿ ಉಜ್ಜೀವಿಸಿರಿ.

(ಸ–ಗಾ–ರೆ)—

ಪ್ರಾಕಾರರಮ್ಯಶುಭಕಣ್ವಪುರಾಧಿನಾಥಃ
ಪ್ರಾಪ್ತಸ್ಸ ಏವ ಹಿ ಪುರಾ ವಟಪತ್ರಶಯ್ಯಾಮ್ ।
ತಸ್ಯಾಂಘ್ರಿಯುಗ್ಮನಿಕಂ ಪ್ರತಿಪದ್ಯ ಪದ್ಮೈ–
ರಾರಾಧ್ಯ ಪಾಪರಹಿತಾ ಭವತಾತ್ರ ಧನ್ಯಾಃ ॥

ತಾ॥ ಸಮುದ್ರದ ಅಲೆಗಳಿಂದ ಹೊಡೆಯಲ್ಪಟ್ಟ ಪ್ರಾಕಾರಗಳಿಂದ ಪರಿವೃತವಾದ ಶ್ರೀಕಣ್ಣಪುರದಲ್ಲಿ ವಾಸಮಾಡುತ್ತಿರುವ ವಟಪತ್ರಶಾಯಿಯಾದ ಸ್ವಾಮಿಯ ಪಾದಯುಗಳದಲ್ಲಿ ಪ್ರೇಮಾತಿಶಯವನ್ನು ಹೊಂದಿ ಅಹೋರಾತ್ರಗಳಲ್ಲಿ ನಿತ್ಯವೂ ತಾವರೆಹೂವುಗಳನ್ನು ಸಮರ್ಪಿಸಿ ನಿಮ್ಮ ಕ್ಲೇಶವೆಲ್ಲಾ ತೀರುವಂತೆ, ಕೈಂಕರ್ಯವಂ ಮಾಡಿ ಉಜ್ಜೀವಿಸಿರಿ.

(೨) ಕಳ್ಳವಿಳ್ಳುಮ್ ಮಲರಿಟ್ಟು ನೀರಿಱೈಞ್ಜುಮಿನ್,
ನಳ್ಳಿಶೇರುಮ್ ವಯಲ್‌ಶೂೞ್ ಕಿಡಙ್ಗಿನ್‌ಪುಡೈ,
ವೆಳ್ಳಿಯೇಯ್‌ನ್ದ ಮದಿಳ್‌ಶೂೞ್ ತಿರುಕ್ಕಣ್ಣಪುರಮ್
ಉಳ್ಳಿ, ನಾಳುಮ್ ತೊೞುದೆೞುಮಿನೋ ತೊಣ್ಡರೇ॥

ಪ್ರ॥ ತೊಣ್ಡರ್–ಭೋಗಚಪಲರಾದ, ನೀರ್–ನೀವುಗಳು, ಕಳ್ – ಮಧುವನ್ನು, ಅವಿೞ್ಗುಮ್ – ಸ್ರವಿಸುವ, ಮಲರಿಟ್ಟು – ಪುಷ್ಪಗಳನ್ನು ಸಮರ್ಪಿಸಿ, ಇಱೈಞ್ಜುಮಿನ್–ಆರಾಧಿಸಿರಿ. ನಳ್ಳಿ – ನಳ್ಳಿಗಳು, ಶೇರುಮ್–ತಮ್ಮ ಸ್ತ್ರೀಸಹಿತವಾಗಿ ಸೇರಿಕೊಂಡು ಇರುವ, ವಯಲ್ – ಕ್ಷೇತ್ರಗಳಿಂದ, ಶೂೞ್–ಪರಿವೃತವಾದ, ಕಿಡಙ್ಗಿನ್–ಕನ್ದಕಗಳ, ಪುಡೈ–ಪಾರ್ಶ್ವದಲ್ಲಿ, ವೆಳ್ಳಿಯೇಯ್‌ನ್ದ–ಬೆಳ್ಳಿಯಿಂದ ಮಾಡಲ್ಪಟ್ಟ, ಮದಿಳ್–ಪ್ರಾಕಾರದಿಂದ, ಶೂೞ್ – ಪರಿವೃತವಾದ, ತಿರುಕ್ಕಣ್ಣಪುರಮ್–ಶ್ರೀಕಣ್ಣಪುರವನ್ನು, ನಾಳುಮ್ ಉಳ್ಳಿ–ನಿತ್ಯವೂ ಸ್ಮರಿಸಿ, ತೊೞುದು ಎೞುಮಿನೋ–(ಕೈಂಕರ್ಯಮಾಡಿ) ಸೇವಿಸಿ ಉಜ್ಜೀವಿಸಿರಿ.

( ಸ–ಗಾ–ರ ॥ )—

ಭಕ್ತಾಸ್ತ್ವಯೂಯಮಧುನಾ ಭಜತಾಚ್ಯುತಂ ತಂ
ಪುಷ್ಪೈಸ್ತು ರಮ್ಯವಲಯೇನ ಚ ರಾಜತೇನ |
ಸಂಶೋಭಿತೇ ಸಪದಿ ಕಣ್ಣಪುರೇ ವಸನ್ತಂ
ಭಕ್ತ್ಯಾ ಭಜಧ್ವಮನಿಶಂ ಚ ಪುರಂ ಕೃತಾರ್ಥಾಃ ||

ತಾ॥ ಅವನ ಭೋಗಚಾಪಲ್ಯವುಳ್ಳ ಭಕ್ತರಾದ ನೀವುಗಳು ಮಧುಸ್ಯನ್ದಿಯಾದ ಪುಷ್ಪಗಳನ್ನು ಸಮರ್ಪಿಸಿ ಅವನನ್ನು ಆರಾಧಿಸಿರಿ. ರಜತಮಯ ಪ್ರಾಕಾರ ಪರಿವೃತವಾದ ಶ್ರೀಕಣ್ಣಪುರವನ್ನು ನಿತ್ಯವೂ ಸ್ಮರಿಸಿ ಸೇವಿಸಿ ಉಜ್ಜೀವಿಸಿರಿ.

(೩) ತೊಣ್ಡರ್ನುಮ್ತಮ್ ತುಯರ್ಪೋಕ ನೀರೇಕಮಾಯ್,
ವಿಣ್ಡುವಾಡಾ ಮಲರಿಟ್ಟು ನೀರಿರೈಞ್ಜುಮಿನ್,
ವಣ್ಡುಪಾಡುಮ್ ಪೊೞಿಲ್ಶೂೞ್ ತಿರುಕ್ಕಣ್ಣಪುರ-
ತ್ತಣ್ಣಲಾರ್, ಅಮರರ್ ಪೆರುಮಾನೈಯೇ.

ಪ್ರ॥ ವಣ್ಡುಪಾಡುಮ್–ಭ್ರಮರಗಳು ಹಾಡುತ್ತಿರುವ, ಪೊೞಿಲ್–ಉದ್ಯಾನಗಳಿಂದ, ಶೂೞ್–ಪರಿವೃತವಾದ, ತಿರುಕ್ಕಣ್ಣಪುರತ್ತು–ಶ್ರೀ ಕಣ್ವಪುರದಲ್ಲಿ, ಅಣ್ಣಲಾರ್–ಪರಮಪದವಾಸಿಯಾದ, ಅಮರರ್ ಪೆರುಮಾನೈ–ದಿವ್ಯಸೂರೀಶ್ವರನನ್ನು ಕುರಿತು, ತೊಣ್ಡರ್ – ಕೈಂಕರ್ಯರುಚಿಯುಳ್ಳ ಭಕ್ತರೇ!, ನುಮ್ತಮ್ – ನಿಮ್ಮ, ತುಯರ್–ಕ್ಲೇಶವು, ಪೋಕ–ನಷ್ಟವಾಗುವಂತೆ, ನೀರ್–ನೀವು, ಏಕಮಾಯ್–ಏಕಾಗ್ರಚಿತ್ತರಾಗಿ, ವಿಣ್ಡು – ವಿಕಾಸವಂ ಹೊಂದುತ್ತಿರುವ, ವಾಡಾ – ಬಾಡದೆ ಇರುವ, ಮಲರಿಟ್ಟು – ಪುಷ್ಪಗಳನ್ನು ಸಮರ್ಪಿಸಿ, ನೀರ್ ಇರೈಞ್ಜುಮಿನ್–ನೀವು ಕೈಂಕರ್ಯವಂಮಾಡಿ ಆರಾಧಿಸಿರಿ.

( ಸ–ಗಾ–ರ ॥ )—

ಉದ್ಯಾನಶೋಭಿಶುಭಕಣ್ವಪುರಾಧಿನಾಥಂ
ವೈಕುಣ್ಠನಾಥಮಮರಾಧಿಪತಿಂ ಮುರಾರಿಮ್ ।
ಭಕ್ತಾ ಭಜನ್ತು ಮಿಳಿತಾಸ್ಸು ಭವನ್ತ ಏವಂ
ಭಕ್ತ್ಯಾ ಸಮರ್ಪ್ಯ ಕುಸುಮಾನಿ ಚ ವೀತದುಃಖಾಃ ॥

ತಾ॥ ಭ್ರಮರಗಳು ಹಾಡುತ್ತಿರುವ ಉದ್ಯಾನಗಳಿಂದ ಪರಿವೃತವಾದ ಶ್ರೀ ಕಣ್ವಪುರದಲ್ಲಿ ಪರಮಪದವಾಸಿಯಾದ ದಿವ್ಯಸೂರೀಶ್ವರನ ವಿಷಯದಲ್ಲಿ ಕೈಂಕರ್ಯರುಚಿಯುಳ್ಳ ಭಕ್ತರೇ! ನಿಮ್ಮ ಕ್ಲೇಶವು ತೀರುವಂತೆ ನೀವು ಏಕಾಗ್ರಚಿತ್ತರಾಗಿ ನೂತನ ದಿವ್ಯ ಕುಸುಮಗಳನ್ನು ಸಮರ್ಪಿಸಿ ಆರಾಧಿಸಿರಿ.

(೪) ಮಾನೈನೋಕ್ಕಿ ಮಡಪ್ಪಿನೈ, ತಕ್ಕೇಳ್ವನೈ,
ತೇನೈ ವಾಡಾ ಮಲರಿಟ್ಟು ನೀರಿರೈಞ್ಜುಮಿನ್,
ವಾನೈಯುನ್ದು ಮದಿಳ್ಶೂೞ್ ತಿರುಕ್ಕಣ್ಣಪುರಮ್
ತಾನಯನ್ದ ಪೆರುಮಾನ್ ಶರಣಾಕುಮೇ.

ಪ್ರ॥ ಮಾ೯–ಹುಲ್ಲೆಕರವು, ನೈ–ಸೋತುಹೋಗುವಂತೆ, ನೋಕ್ಕಿ-ರಮ್ಯ ದೃಷ್ಟಿಯುಳ್ಳ, ಮಡಪ್ಪಿನ್ನೈ–ಆತ್ಮಗುಣಪೂರ್ಣೆಯಾದ ನೀಳಾದೇವಿಗೆ, ಕೇಳ್ವನೈ–ಪ್ರಿಯವಲ್ಲಭನಾದ ಸ್ವಾಮಿಯನ್ನು, ತೇನೈ–ಮಧುವಿನಂತೆ ಭೋಗ್ಯನಾದವನನ್ನು, ವಾಡಾ–ಬಾಡದೆ ಇರುವ, ಮಲರಿಟ್ಟು–ಪುಷ್ಪಗಳನ್ನು ಸಮರ್ಪಿಸಿ, ನೀರ್–ನೀವು, ಇತ್ತೈಞ್ಜ್ ನ್ಱು–ಆರಾಧಿಸಿರಿ. ವಾನೈ–ಆಕಾಶವನ್ನು, ಉನ್ದು–ವ್ಯಾಪಿಸಿ ಉನ್ನತವಾದ, ಮದಿಳ್–ಪ್ರಾಕಾರದಿಂದ, ಶೂೞ್–ಪರಿವೃತವಾದ, ತಿರುಕ್ಕಣ್ಣಪುರಮ್–ಶ್ರೀಕಣ್ಣಪುರವನ್ನು, ತಾನೆಯನ್ದು–ತಾನೇ ವಾಸಕ್ಕೆ ಆಶೆಪಟ್ಟ, ಪೆರುಮಾ೯– ಸರ್ವೇಶ್ವರನು, ಶರಣ್ ಆಕುಮೇ–ರಕ್ಷಕನಾಗುವನು.

( ಸ-ಗಾ-ರ ॥ )—

ಕಾನ್ತಸ್ಯ ಯಸ್ಯ ಸತತಂ ಹರಿಣಾಯತಾಕ್ಷೀ
ನೀಳಾ ಪ್ರಿಯಾ ಸಪದಿ ತಂ ಮಧುರಂ ಗುಣಾಢ್ಯಮ್ ।
ಆರಾಧ್ಯ ಕಣ್ಣಪುರನಾಥಮಿತ್ಯೈವ ಪುಷ್ಪೈ-
ರ್ಧ್ಯಾಯಂ ಭಜಧ್ವಮಯಮೇವ ಭವೇಚ್ಛರಣ್ಯಃ ॥

ತಾ॥ ಮೃಗಲೋಚನೆಯಾದ ನೀಳಾದೇವಿಗೆ ಪ್ರಿಯವಲ್ಲಭನಾಗಿಯೂ ಮಧುವಿನಂತೆ ಭೋಗ್ಯನಾಗಿಯೂ ಇರುವ ಸ್ವಾಮಿಯನ್ನು ಅಭಿನವಕುಸುಮಗಳಿಂದ ಆರಾಧಿಸಿರಿ. ಉನ್ನತಪ್ರಾಕಾರಪರಿವೃತವಾದ ಶ್ರೀಕಣ್ಣಪುರವನ್ನು ತಾನೇ ವಾಸಕ್ಕಾಗಿ ಆಶೆಪಟ್ಟ ಸರ್ವೇಶ್ವರನು ನಿಮಗೆ ರಕ್ಷಕನಾಗುವನು.

(೫) ಶರಣಮಾಕುಮ್ ತನತಾಳಡೈನ್ದಾರ್ಕ್ಕೆಲ್ಲಾಮ್,
ಮರಣಮಾನಾಲ್ ವೈಕುನ್ದಮ್ ಕೊಡುಕ್ಕುಮ್ ಪಿರಾ೯,
ಅರಣಮೈನ್ದ ಮದಿಳ್ಶೂೞ್ ತಿರುಕ್ಕಣ್ಣಪುರ-
ತ್ತರಣಿಯಾಳ೯, ತನದನ್ಬರ್ಕ್ಕನ್ಬಾಕುಮೇ.

ಪ್ರ॥ ತನತಾಳ್ ಅಡೈನ್ದಾರ್ಕ್ಕೆಲ್ಲಾಮ್ – ತನ್ನಪಾದಗಳನ್ನು ಆಶ್ರಯಿಸಿದವರಿಗೆಲ್ಲಾ, ಶರಣಮ್ ಆಕುಮ್–ರಕ್ಷಕನಾಗುವವನೂ, ಮರಣಮ್ ಆನಾಲ್–ಮರಣವು ಪ್ರಾಪ್ತವಾದರೆ, ವೈಕುನ್ದಮ್ ಕೊಡುಕ್ಕುಮ್–ವೈಕುಣ್ಠವೆಂಬ ಮೋಕ್ಷಸ್ಥಾನವನ್ನು ಕೊಡುವವನೂ ಆದ, ಪಿರಾ೯ – ಸ್ವಾಮಿಯು; ಅರಣ್ ಅಮೈನ್ದ–ಕ್ಷೇಮಜನಕವಾಗಿ ಭದ್ರವಾಗಿ ರಚಿಸಲ್ಪಟ್ಟ, ಮದಿಳ್ ಶೂೞ್–ಪ್ರಾಕಾರದಿಂದ ಪರಿವೃತವಾದ, ತಿರುಕ್ಕಣ್ಣಪುರಮ್–ಶ್ರೀಕಣ್ಣಪುರದಲ್ಲಿ, ತರಣಿಯಾಳ೯–ಭೂಮಿಯನ್ನು

ರಕ್ಷಿಸುವುದಕ್ಕೆ ಬಂದು ನಿಂತಿರುವವನು, ತನದು ಅನ್ಬರ್‌ಕ್ಕು-ತನ್ನ ಭಕ್ತರಿಗೆ, ಅನ್ಬು ಆಕುಮೇ-ಪ್ರೀತಿಮಯನಾಗುವನು.

( ಸ-ಗಾ-ರ ॥ )—

ಸೋಽಯಂ ಭವೇಚ್ಛ ಶರಣಂ ಶರಣಾಗತಾನಾಂ
ವೈಕುಣ್ಠಮೇವ ತನುತೇ ಮರಣಂ ಗತಾನಾಂ ।
ಸ್ವಾಮೀ ಲಸದ್ವಲಯ-ಕಣ್ವಪುರಾಧಿನಾಥೋ
ಭೂಪಾಲಕೋ ಭವತಿ ಭಕ್ತಜನೇಷು ಭಕ್ತಃ ॥

ತಾ॥ ತನ್ನ ಪಾದಗಳನ್ನು ಆಶ್ರಯಿಸಿದವರಿಗೆಲ್ಲಾ ರಕ್ಷಕನಾಗುವವನೂ, ಮರಣವು ಪ್ರಾಪ್ತವಾದ ವೈಕುಣ್ಠವಾಸವನ್ನು ಕೊಡುವವನೂ ಆದ ಸ್ವಾಮಿಯು ದೃಢತಮ ಪ್ರಾಕಾರಾವೃತವಾದ ಶ್ರೀಕಣ್ವಪುರದಲ್ಲಿ ಭೂಮಿಯನ್ನು ರಕ್ಷಿಸುವುದಕ್ಕೋಸ್ಕರ ಬಂದು ನಿಂತಿರುವವನಾಗಿ ತನ್ನ ಭಕ್ತರಿಗೆ ಪ್ರೀತಿಮಯನಾಗುವನು (ತನ್ನ ಪ್ರಿಯತಮರಿಗೆ ತಾನು ಪ್ರಿಯತಮನಾಗುವನು).

(೬) ಅನ್ಬನಾಕುಮ್ ತನತಾಳಡೈನ್ದಾರ್‌ಕ್ಕೆಲ್ಲಾಮ್
ಶೆಮ್ಬೊನಾಕತ್ತವುಣನುಡಲ್ ಕೀಣ್ಡಾನ್,
ನನ್ಪೊನೇಯ್‌ನ್ದ ಮದಿಳ್‌ಶೂಳ್ ತಿರುಕ್ಕಣ್ಣಪುರ-
ತ್ತನ್ಬನ್, ನಾಳುಮ್ ತನಮೆಯ್ಯರ್‌ಕ್ಕು ಮೆಯ್ಯನೇ.

ಪ್ರ॥ ತನತಾಳ್ ಅಡೈನ್ದಾರ್‌ಕ್ಕೆಲ್ಲಾಮ್-ತನ್ನ ಪಾದಗಳನ್ನು ಆಶ್ರಯಿಸಿದವರಿಗೆಲ್ಲಾ, ಅನ್ಬನಾಕುಮ್ - ಪ್ರಿಯತಮನಾಗಿ, ಶೆಮ್ಬೊನ್ ಆಕತ್ತು-ಕೆಂಪಾದ ಸುವರ್ಣದೋಪಾದಿಯಲ್ಲಿ ಶರೀರವುಳ್ಳ, ಅವುಣನ್-ಹಿರಣ್ಯಾಸುರನ, ಉಡಲ್-ಶರೀರವನ್ನು, ಕೀಣ್ಡಾನ್-ಸೀಳಿದವನಾದ (ನರಸಿಂಹ) ಸ್ವಾಮಿಯು. ನನ್ಪೊನ್ ಏಯ್‌ನ್ದ-ಒಳ್ಳೇ ಬಂಗಾರದಿಂದ ರಚಿಸಲ್ಪಟ್ಟ, ಮದಿಳ್‌ಶೂಳ್-ಪ್ರಾಕಾರದಿಂದ ಪರಿವೃತವಾದ, ತಿರುಕ್ಕಣ್ಣಪುರತ್ತು - ಶ್ರೀಕಣ್ವಪುರದಲ್ಲಿ, ಅನ್ಬನ್-ಪ್ರೀತಿಯೊಡನೆ ವಾಸಮಾಡುವ ಸ್ವಾಮಿಯು, ತನಮೆಯ್ಯರ್‌ಕ್ಕು - ತನ್ನ ವಿಷಯದಲ್ಲಿ ಪಾರಮಾರ್ಥಿಕ ಪ್ರಾವಣ್ಯವುಳ್ಳವರಿಗೆ, ನಾಳುಮ್-ಸರ್ವಕಾಲದಲ್ಲೂ, ಮೆಯ್ಯನೇ-ತಾನೂ ಪಾರಮಾರ್ಥಿಕ ಪ್ರೀತಿಯುಳ್ಳವನಾಗಿಯೇ ಇರುವನು.

( ಸ–ಗಾ–ರ ॥ )—

ಸ್ವಾಂಘ್ರಿದ್ವಯಾಶ್ರಿತಜನೇಷು ಚ ವತ್ಸಲೋಽಯಂ
ವಕ್ಷೋವಿದಾರಣಪಟುಶ್ಚ ಹಿರಣ್ಯಕಸ್ಯ ।
ಸೌವರ್ಣಸದ್ವಲಯ—ಕಣ್ವಪುರಾಧಿನಾಥ–
ಸ್ವತ್ವಾಶ್ರಯೇಷು ಸತತಂ ಚ ಭವೇತ್ಸ ಸತ್ಯಃ ॥

ತಾ॥ ತನ್ನ ಪಾದಗಳನ್ನು ಆಶ್ರಯಿಸುವವರಿಗೆಲ್ಲಾ ಪ್ರಿಯತಮನಾಗಿ ಹಿರಣ್ಯಾಸುರ ವಕ್ಷೋವಿದಾರಕನಾದ ನರಸಿಂಹಸ್ವಾಮಿಯು ಸ್ವರ್ಣಮಯಪ್ರಾಕಾರಾನ್ವಿತವಾದ ಶ್ರೀಕಣ್ವಪುರದಲ್ಲಿ ವಾಸಮಾಡುವವನಾಗಿ, ತನ್ನ ವಿಷಯದಲ್ಲಿ ಪಾರಮಾರ್ಥಿಕಪ್ರಾವಣ್ಯವುಳ್ಳವರಿಗೆ ಸರ್ವಕಾಲದಲ್ಲೂ ತಾನು ಪಾರಮಾರ್ಥಿಕಪ್ರೀತಿಯುಳ್ಳವನಾಗಿಯೇ ಇರುವನು.

(೭) ಮೆಯ್ಯನಾಕುಮ್ ವಿರುಮ್ಬಿ ತ್ತೊೞುವಾರ್ಕ್ಕೆಲ್ಲಾಮ್,
ಪೊಯ್ಯನಾಕುಮ್ ಪುಱಮೇ ತೊೞುವಾರ್ಕ್ಕೆಲ್ಲಾಮ್,
ಶೆಯ್ಯಿಲ್ ವಾಳೈಯುಕಳುಮ್ ತಿರುಕ್ಕಣ್ಣಪುರ–
ತ್ತಯ್ಯನ್, ಅಕತ್ತಣ್ಣೈಪ್ಪಾರ್ಕಳ್ಕ್ಕಣಿಯನೇ.

ಪ್ರ॥ ವಿರುಮ್ಬಿ ತ್ತೊೞುವಾರ್ಕ್ಕೆಲ್ಲಾಮ್ – ಪ್ರೀತಿಯಿಂದ ಆಶ್ರಯಿಸುವವರಿಗೆಲ್ಲಾ, ಮೆಯ್ಯನಾಕುಮ್–ಸತ್ಯನಾಗಿ ಪ್ರಕಾಶಿಸುವನು. ಪುಱಮೇ ತೊೞುವಾರ್ಕ್ಕೆಲ್ಲಾಮ್–ಹೊರಗೆ ಪ್ರಯೋಜನಪರರಾಗಿ ಆಶ್ರಯಿಸುವವರಿಗೆಲ್ಲಾ, ಪೊಯ್ಯನಾಕುಮ್–ತಾನು ಮರೆಸಿಕೊಂಡು ಮಿಥ್ಯಾಭೂತನಾಗುವನು. ಶೆಯ್ಯಿಲ್–ತಮ್ಮ ವಾಸಸ್ಥಾನವಾದ ಕ್ಷೇತ್ರದಲ್ಲಿ, ವಾಳೈ – ಮೀನುಗಳು, ಉಕಳುಮ್–ನೆಗೆದಾಡುವಂತಹ, ತಿರುಕ್ಕಣ್ಣಪುರತ್ತು – ಶ್ರೀ ಕಣ್ವಪುರದಲ್ಲಿರುವ, ಐಯ್ಯನ್ – ನಿರುಪಾಧಿಕಬನ್ಧುವಾದ ಸ್ವಾಮಿಯು, ಅಕತ್ತು – ತಮ್ಮ ಹೃದಯದಲ್ಲಿ ಭಕ್ತಿಯಿಂದ, ಅಣ್ಣೈಪ್ಪಾರ್ಕಳ್ಕ್ಕು–ತನ್ನನ್ನು ಆಶ್ರಯಿಸುವವರಿಗೆ, ಅಣಿಯನೇ – ಸುಲಭನಾಗಿ ಶರಣ್ಯನಾಗುವನು.

( ಸ-ಗಾ-ರ || )—

ಸತ್ಯೋಽಸ್ತ್ಯನನ್ಯಮನಸಾಂ ಕಿಲ ಭಕ್ತಿಭಾಜಾಂ
ಮಿಥ್ಯಾಽಸ್ತಿ ಚಾನ್ಯಮನಸಾಂ ಹರಿರಿನ್ದಿರೇಶಃ !
ಕ್ಷೇತ್ರಾವಳೀಲಸಿತ-ಕಣ್ವಪುರಾಧಿನಾಥೋ
ಭವ್ಯೋ ಭವೇತ್ಕಿಲ ಸದಾ ಶರಣಾಗತಾನಾಮ್ ||

ತಾ|| ಪ್ರೀತಿಯಿಂದ ತನ್ನನ್ನು ಆಶ್ರಯಿಸುವವರಿಗೆಲ್ಲಾ ತಾನು ಸತ್ಯನಾಗಿ (ಸುಲಭನಾಗಿ) ಪ್ರಕಾಶಿಸುವನು. ಪ್ರಯೋಜನಾನ್ತರಪರರಿಗೆಲ್ಲಾ ತಾನು (ಅದೃಶ್ಯನಾಗಿ) ಮಿಥ್ಯಾಭೂತನಾಗುವನು. ರಮ್ಯತಮವಾದ ಸಸ್ಯಕ್ಷೇತ್ರಗಳಿಂದ ಪರಿವೃತವಾದ ಶ್ರೀ ಕಣ್ವಪುರದ ಸ್ವಾಮಿಯು ಪ್ರೀತಿಯಿಂದ ತನ್ನನ್ನು ಆಶ್ರಯಿಸುವವರಿಗೆ ಸುಲಭನಾಗಿ ಶರಣ್ಯನಾಗುವನು.

(೮) ಅಣಿಯನಾಕುಮ್ ತನತಾಳಡೈನ್ದಾರ್ಕ್ಕೆಲ್ಲಾಮ್,
ಪಿಣಿಯೊನ್ರುಮ್ ಶಾರಾ ಪಿಱವಿಕೆಡುತ್ತಾಳುಮ್,
ಮಣಿಪೊನೇಯ್ನ್ದ ಮದಿಳ್‌ಶೂೞ್ ತಿರುಕ್ಕಣ್ಣಪುರಮ್
ಪಣಿಮಿನ್, ನಾಳುಮ್ ಪರಮೇಟ್ಟಿ ತನ್ ಪಾದಮೇ.

ಪ್ರ|| ತನತಾಳ್ – ತನ್ನ ಭೋಗ್ಯವಾದ ಪಾದಗಳನ್ನು, ಅಡೈನ್ದಾರ್ಕ್ಕೆಲ್ಲಾಮ್–ಆಶ್ರಯಿಸಿದವರಿಗೆಲ್ಲಾ, ಅಣಿಯನಾಕುಮ್–ಸುಲಭನಾಗಿ ಪ್ರಾಪ್ಯನಾಗುವನು. ಪಿಣಿ ಒನ್ರುಮ್–ಪ್ರಯೋಜನಾನ್ತರ ಪರತ್ವವೆಂಬ ಒಂದು ವ್ಯಾಧಿಯು, ಶಾರಾ–ನಷ್ಟವಾಗುವುದು. ಪಿಱವಿ–ಜನ್ಮಸಮ್ಬನ್ಧವನ್ನು, ಕೆಡುತ್ತು–ನಾಶಪಡಿಸಿ, ಆಳುಮ್ – ಅನುಕೂಲವಾಗಿ ಕೈಂಕರ್ಯವನ್ನು ಸ್ವೀಕರಿಸುವನು. ಮಣಿಪೊನ್ ಏಯ್ನ್ದ–ರತ್ನಖಚಿತವಾಗಿಯೂ ಸ್ವರ್ಣಮಯವಾಗಿಯೂ ಮಾಡಲ್ಪಟ್ಟ, ಮದಿಳ್ ಶೂೞ್ – ಪ್ರಾಕಾರಗಳಿಂದ ಪರಿವೃತವಾದ, ತಿರುಕ್ಕಣ್ಣಪುರಮ್ – ಶ್ರೀ ಕಣ್ವಪುರದಲ್ಲಿರುವ, ಪರಮೇಟ್ಟಿತನ್‌ಪಾದಮೇ – ಪರಮಪದನಾಥನಾದ ಸ್ವಾಮಿಯ ಪಾದಗಳನ್ನು, ನಾಳುಮ್–ಪ್ರತಿದಿನವೂ, ಪಣಿಮಿನ್– ಆಶ್ರಯಿಸಿ ಸೇವಿಸಿ ಕೃತಾರ್ಥರಾಗಿರಿ.

( ಸ-ಗಾ-ರ ॥ )—

ವಶ್ಯೋ ಭವೇತ್ ಸ್ವಚರಣಾವನ್ಬುಜಭಕ್ತಿಭಾಜಾಂ
ವ್ಯಾಧಿಂ ಪ್ರಣಾಶ್ಯ ಸ ಹಿ ಜನ್ಮತತಿಂ ನಿಹನ್ಯಾತ್ ।
ಸೌವರ್ಣಸದ್ವಲಯ-ಕಣ್ವಪುರೇಶಿತುರ್ವ-
ಸ್ಸಂಸೇವ್ಯಮಂಘ್ರಿಯುಗಳಂ ಪರಮೇಷ್ಠಿನಸ್ತತ್ ॥

ತಾ॥ ತನ್ನ ಭೋಗ್ಯವಾದ ಪಾದಗಳನ್ನು ಆಶ್ರಯಿಸಿದವರಿಗೆಲ್ಲಾ ಸುಲಭನಾಗಿ ಅವನು ಪ್ರಾಪ್ಯನಾಗುವನು. ಪ್ರಯೋಜನಾನ್ತರ ಪರತ್ವರೂಪವಾದ ವ್ಯಾಧಿಯೂ ಶಾನ್ತವಾಗುವುದು. ಜನ್ಮಸಮ್ಬನ್ಧವನ್ನು ನಾಶಪಡಿಸಿ ಅನುಕೂಲವಾಗಿ ಅವನು ಕೈಂಕರ್ಯವನ್ನು ಸ್ವೀಕರಿಸುವನು. ರತ್ನಖಚಿತವಾಗಿಯೂ ಸ್ವರ್ಣಮಯವಾಗಿಯೂ ಮಾಡಲ್ಪಟ್ಟ ಪ್ರಾಕಾರಗಳಿಂದ ಪರಿವೃತವಾದ ಶ್ರೀಕಣ್ವಪುರದಲ್ಲಿರುವ ಆ ಪರಮಪದನಾಥನ ಪಾದಗಳನ್ನು ಪ್ರತಿದಿನವೂ ಆಶ್ರಯಿಸಿ ಸೇವಿಸಿರಿ.

(೯) ಪಾದನಾಳುಮ್ ಪಣಿಯತ್ತಣಿಯುಮ್ ಪಿಣಿ,
ಏದಮ್‌ಶಾರಾ ಎನಕ್ಕೇಲಿನಿ ಯೆನ್ ಕುಱೈ,
ವೇದನಾವರ್ ವಿರುಮ್ಬುಮ್ ತಿರುಕ್ಕಣ್ಣಪುರ-
ತ್ತಾದಿಯಾನೈ, ಅಡೈನ್ದಾರ್‌ಕ್ಕಲ್ಲಲಿಲ್ಲೈಯೇ.

ಪ್ರ॥ ಪಾದ-ಅವನ ಪಾದಗಳನ್ನು, ನಾಳುಮ್ – ಪ್ರತಿದಿನವೂ, ಪಣಿಯ-ಸೇವಿಸಲು, ಪಿಣಿ-ಸಕಲದುಃಖಗಳೂ, ತಣಿಯುಮ್-ಶಾನ್ತವಾಗುವುವು. ಏದಮ್-ಇನ್ನೊಂದು ದುಃಖವೂ, ಶಾರಾ-ಬರಲಾರದು. ಇನಿ-ಇನ್ನುಮೇಲೆ, ಎನಕ್ಕೇಲ್-ನನಗೆ, ಎ಼ ಕುಱೈ-ಏನು ಕೊರತೆಯುಂಟಾಗುವುದು? ವೇದನಾವರ್-ವೇದಾಧ್ಯಯನ ಮಾಡುವವರು, ವಿರುಮ್ಬುಮ್-ಆಶೆಪಟ್ಟು ವಾಸಮಾಡುವ, ತಿರುಕ್ಕಣ್ಣಪುರತ್ತು-ಶ್ರೀ ಕಣ್ವಪುರದಲ್ಲಿರುವ, ಆದಿಯಾನೈ-ಜಗತ್ಕಾರಣಭೂತನಾದ ಸ್ವಾಮಿಯನ್ನು, ಅಡೈನ್ದಾರ್‌ಕ್ಕು-ಆಶ್ರಯಿಸಿದವರಿಗೆ, ಅಲ್ಲಲ್–ದುಃಖವು, ಇಲ್ಲೈಯೇ-ಇಲ್ಲವಷ್ಟೆ!

( ಸ-ಗಾ-ರ || )—

ತಸ್ಯಾಂಘ್ರಿಯುಗ್ಮಭಜನಾತ್ಸಕಲಂ ಚ ದುಃಖಂ
ನಶ್ಯೇನ್ನ ಭೀತಿಕಣಿಕಾಽಸ್ತಿ ಮಮಾದ್ಯ ಕಾಽಪಿ |
ಶ್ರೀವೇದವಿದ್ವಸತಿ-ಕಣ್ವಪುರಾಧಿನಾಥಂ
ಮೂಲಂ ಪರಂತು ಭಜತಾಂ ನ ಹಿ ದುಃಖಗನ್ಧಃ ||

ತಾ|| ಆವನ ಪಾದಗಳನ್ನು ಪ್ರತಿದಿನವೂ ಸೇವಿಸಿದರೆ ಸಕಲ ದುಃಖಗಳೂ ಶಾನ್ತವಾಗುವುವು. ಇನ್ನೊಂದು ದುಃಖವೂ ಬರಲಾರದು. ಇನ್ನುಮೇಲೆ ನನಗೆ ಯಾವ ಕೊರತೆಯುಂಟು? ವೇದಾಧ್ಯಯನಮಾಡುವವರು ಆದರದಿಂದ ವಾಸ ಮಾಡುವ ಶ್ರೀ ಕಣ್ವಪುರದಲ್ಲಿರುವ ಜಗತ್ಕಾರಣಭೂತನಾದ ಸ್ವಾಮಿಯನ್ನು ಆಶ್ರಯಿಸಿದವರಿಗೆ ಯಾವ ದುಃಖವೂ ಇಲ್ಲವಷ್ಟೆ !

(೧೦) ಇಲ್ಲೈಯಲ್ಲಲೆನಕ್ಕೇಲಿನಿ ಯೆನ್ ಕುತ್ತೈ,
ಅಲ್ಲಿಮಾದರಮರುಮ್ ತಿರುಮಾರ್ಬನ್,
ಕಲ್ಲಿಲೇಯ್ನ್ದ ಮದಿಳ್‌ಶೂೞ್ ತಿರುಕ್ಕಣ್ಣಪುರಮ್
ಶೊಲ್ಲ, ನಾಳುಮ್ ತುಯರ್ ಪಾಡು ಶಾರಾವೇ.

ಪ್ರ|| ಅಲ್ಲಿ ಮಾದರ್- ಪದ್ಮವಾಸಿನಿಯಾದ ಲಕ್ಷ್ಮಿಯು, ಅಮರುಮ್-ನಿತ್ಯ ವಾಸಮಾಡುವ, ತಿರುಮಾರ್ಬನ್-ವಕ್ಷಸ್ಸ್ಥಲವುಳ್ಳ ಸ್ವಾಮಿಯು, ಕಲ್ಲಿಲ್ ಏಯ್ನ್ದ-ಕಲ್ಲಿನಿಂದ ಕಟ್ಟಲ್ಪಟ್ಟ, ಮದಿಳ್‌ಶೂೞ್-ಪ್ರಾಕಾರಗಳಿಂದ ಪರಿವೃತವಾದ, ತಿರುಕ್ಕಣ್ಣಪುರಮ್-ಶ್ರೀ ಕಣ್ವಪುರವನ್ನು, ಶೊಲ್ಲ-ಸಂಕೀರ್ತನಮಾಡಿದರೆ, ನಾಳುಮ್-ಸರ್ವಕಾಲದಲ್ಲೂ, ತುಯರ್-ದುಃಖನೆಲ್ಲಾ, ಪಾಡುಶಾರಾವೇ -- ಸಮೀಪಕ್ಕೆ ಬರುವುದೇ ಇಲ್ಲ. (ಆದುದರಿಂದ) ಎನಕ್ಕೇಲ್-ನನಗೆ, ಅಲ್ಲಲ್-ದುಃಖವು, ಇಲ್ಲೈ-ಇಲ್ಲವೇ ಇಲ್ಲ. ಇನಿ-ಹೀಗಾದರೆ, ಎನ್ ಕುತ್ತೈ-(ನನಗೆ) ಯಾವ ಕೊರತೆಯುಂಟು?

( ಸ-ಗಾ-ರ || )—

ಪದ್ಮಾಲಯಾಮುರಸಿ ಯಸ್ತು ದಧಾತಿ ತಸ್ಯ
ಪ್ರಾಕಾರಶೋಭಿ-ಶುಭಕಣ್ವಪುರ-ಪ್ರಶಂಸಾ |
ದುಃಖಾಸಹಾ ಭವತಿ ಮೇ ! ನ ಹಿ ಭಾತಿ ಚಿನ್ತಾ !
ತಸ್ಮಾನ್ನ ಮೇಽದ್ಯ ಕಿಲ ಕಿಞ್ಚಿದಿಹಾಸ್ತ್ಯಲಭ್ಯಮ್ ||

ತಾ॥ ಪದ್ಮವಾಸಿನಿಯಾದ ಲಕ್ಷ್ಮೀದೇವಿಯನ್ನು ವಕ್ಷಸ್ಸ್ಥಲದಲ್ಲಿ ಧರಿಸಿರುವ ಸ್ವಾಮಿಯು ವಾಸಮಾಡುವ ದೃಢತಮ ಪ್ರಾಕಾರಾವೃತವಾದ ಶ್ರೀ ಕಣ್ಣಪುರವನ್ನು ಸಂಕೀರ್ತನಮಾಡಿದರೆ ಸರ್ವಕಾಲದಲ್ಲೂ ಸರ್ವವಿಧದುಃಖವೂ ಶಾನ್ತವಾಗುವುದು. ಯಾವ ದುಃಖವೂ ಸಮೀಪಕ್ಕೆ ಬರಲಾರದು. ಆದುದರಿಂದ ನನಗೆ ಯಾವ ದುಃಖವೂ ಇಲ್ಲ. ಹೀಗಿರುವಲ್ಲಿ ನನಗೆ ಯಾವ ಕೊರತೆಯುಂಟು?

(೧೧) ಪಾಡುಶಾರಾ ವಿನೈ ಪಱ್ಱಱವೇಣ್ಡುವೀರ್,
ಮಾಡನೀಡು ಕುರುಕೂರ್ ಚ್ಚಡಕೋಪನ್, ಶೊಲ್
ಪಾಡಲಾನ ತಮಿೞಾಯಿರತ್ತುಳಿಪ್ಪತ್ತುಮ್,
ಪಾಡಿಯಾಡಿ ಪ್ಪಣಿಮಿನವನ್ ತಾಳ್ಕಳೇ.

ಪ್ರ॥ ವಿನೈ – ಸಕಲದುಃಖವೂ, ಪಾಡುಶಾರಾ – ಸಮೀಪಕ್ಕೆ ಬರದಂತೆ, ಪಱ್ಱಱವೇಣ್ಡುವೀರ್–ದುಃಖಗನ್ಧವೂ ಇಲ್ಲದಂತೆ ನಿರ್ಮೂಲ ಮಾಡಬೇಕೆಂದು ನೀವು ಉದ್ದೇಶಿಸಿ ಇದ್ದರೆ, ಮಾಡ– ಉಪ್ಪರಿಗೆಗಳು, ನೀಡು–ಉನ್ನತವಾಗಿ ಪ್ರಕಾಶಿಸುವ, ಕುರುಕೂರ್–ಕುರುಕಾಪುರಿಯ, ಶಡಕೋಪನ್ – ಶ್ರೀ ಶಠಾರಿಮುನಿಯು, ಶೊಲ್–ರಚಿಸಿರುವ, ಪಾಡಲಾನ– ಗಾನರೂಪವಾದ, ತಮಿೞ್ – ದ್ರಾವಿಡಭಾಷಾತ್ಮಕವಾದ, ಆಯಿರತ್ತುಳ್ – ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್ – ಈ ದಶಕವನ್ನು, ಪಾಡಿ–ಹಾಡಿ, ಆಡಿ – (ಆನಂದದಿಂದ) ಸಂಭ್ರಮದೊಡನೆ ನರ್ತನ ಮಾಡಿ, ಅವನ್ ತಾಳ್ಕಳ್–ಅವನ (ಕಣ್ಣಪುರಾಧೀಶನ) ಪಾದಗಳನ್ನು, ಪಣಿಮಿನ್– ಆಶ್ರಯಿಸಿ ಸೇವಿಸಿ ಕೃತಾರ್ಥರಾಗಿರಿ

( ಸ–ಗಾ–೧ || )—

ಸರ್ವಾಘನಾಶವಿಧಯೇ ಕುರುಕಾಪುರೀಶಃ
ಶ್ರೀಮಾನ್ ಶಠಾರಿರವದತ್ಸರಸಂ ಸಹಸ್ರಮ್ ।
ತತ್ರೇದಮೇವ ದಶಕಂ ಪರಿಗಾಯ ನೃತ್ಯೈಃ
ಶ್ರೀಶಸ್ಯ ಪಾದಯುಗಳಂ ಶರಣಂ ಭಜಧ್ವಮ್ ॥

ತಾ॥ ಸಕಲ ದುಃಖನಿರ್ಮೂಲನವಂ ಮಾಡಬೇಕೆಂದು ಅಪೇಕ್ಷಿಸುವ ನೀವುಗಳೆಲ್ಲರೂ ಉನ್ನತಪ್ರಾಸಾದಭರಿತವಾದ ಕುರುಕಾಪುರಿಯ ಶ್ರೀ ಶಠಾರಿಮುನಿಯು ರಚಿಸಿರುವ ಗೀತರೂಪವಾದ ದ್ರಾವಿಡಭಾಷಾತ್ಮಕ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಹಾಡಿ ಆನನ್ದದಿಂದ ನರ್ತನಮಾಡಿ, ಶ್ರೀ ಕಣ್ಣಪುರಾಧೀಶನಾದ ಆ ಸ್ವಾಮಿಯ ಪಾದಗಳನ್ನು ಭಜಿಸಿ ಸೇವಿಸಿ ಕೃತಾರ್ಥರಾಗಿರಿ.

( ದ್ರ-ಉ-ಸಂ ॥ ) —

ಪ್ರಾಪ್ತಿಪ್ರದಾನಸಮಯೋಚಿತಮಿತಿ ಪ್ರಕಾಶ್ಯ
ಸ್ವಸ್ಯ ಪ್ರಿಯಂ ಮುಕತಿ ಕೃಷ್ಣಪುರೇ ವಸನ್ತಮ್ ।
ಈಶಂ ಯಥಾಂಶಕನಮಾಶ್ರಯತೇತಿ ಹರ್ಷಾ-
ದನ್ಯೋಪದೇಶಮಕರೋದ್ದಶಮೇ ಮುನೀನ್ದ್ರಃ ॥

( ದ್ರ-ಉ-ತಾ-ರ ॥ )—

ಸರ್ವಶ್ರೈಷ್ಠ್ಯಾತ್ ಸ್ವಕೀಯೈರಪಿ ಜಗದವನಾದಣ್ಡಷಣ್ಡಾಧಿಪತ್ವಾತ್
ನೀಲಾಯಾ ವಲ್ಲಭತ್ವಾದಮೃತವಿತರಣಾದ್ಭಕ್ತಸುಸ್ನಿಗ್ಧಭಾವಾತ್ ।
ದಾಸಾನಾಂ ಸತ್ಯಭಾವಾದತಿಸುಜನತಯಾಽಥೋ ಜಗತ್ಕಾರಣತ್ವಾತ್
ಶ್ರೀಮಾನ್ ವೇಲಾಪ್ರತೀಕ್ಷೋ ಭವಭಯಹರಣೇ ಚೇತ್ಯಭಾಣೀಚ್ಛಠಾರಿಃ ॥

ಇತ್ಥಂ ಸರ್ವೈಕಬನ್ಧುಂ ಚಿರಕೃತಕರುಣಂ ಶೀಲಸಿನ್ಧುಂ ಪತಿತ್ವಾತ್
ಸನ್ವನ್ನಾದ್ಯುಕ್ತಿತಾರಂ ಸ್ವಗುಣಗರಿಮಸಂಸ್ಮಾರಣಂ ಪ್ರಾಹ ಕೃಷ್ಣಮ್ ।
ವಿಸ್ಮರ್ತುಂ ಚಾಪ್ಯಶಕ್ಯಂ ಘಟಿಕಮುಖಸುವಿಸ್ರಮ್ಭಣೀಯಂ ಸುಮತ್ಯಾ
ಲಕ್ಷ್ಮ್ಯಾಶ್ಲಿಷ್ಟಂ ಸ್ವಸಿದ್ಧ್ಯೈಕನ್ಮುಖಸಮಯಮನೇಹಃಪ್ರತೀಕ್ಷಂ
ಸುಮಿತ್ರಮ್ ॥

( ಈ ದಶಮದಶಕದ ಸಾರಾಂಶ— )

ಈ ಹತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಿರುಕ್ಕಣ್ಣಪುರವೆಂಬ ಶ್ರೀ ಕಣ್ಣಪುರಾಖ್ಯ ದಿವ್ಯಕ್ಷೇತ್ರದ ಸ್ವಾಮಿಯನ್ನು ಕುರಿತು ಮಙ್ಗಳಾಶಾಸನ ಪರರಾಗಿ, ಭಕ್ತರನ್ನು ಸಂಬೋಧಿಸಿ—"ನೀವು ಆ ಸ್ವಾಮಿಗೆ ತಾವರೆಪುಷ್ಪಗಳನ್ನು ಸಮರ್ಪಿಸಿ ಆರಾಧಿಸಿರಿ" ಎಂತಲೂ, "ಶ್ರೀ ಕಣ್ಣಪುರವನ್ನೇ ನೀವು ನಿತ್ಯವೂ ಸ್ಮರಿಸಿ ಉಜ್ಜೀವಿಸಿರಿ" ಎಂತಲೂ ಉಪದೇಶಿಸಿ, "ಭಕ್ತರಿಗೆ ಮೋಕ್ಷಪ್ರದನಾಗಿಯೂ,

ಹಿರಣ್ಯಾಸುರ ವಕ್ಷೋವಿದಾರಕನಾಗಿಯೂ, ಆಶ್ರಿತರಿಗೆ ಸತ್ಯಸ್ವರೂಪನಾಗಿಯೂ, ಸಕಲ ದುಃಖನಿವರ್ತಕನಾಗಿಯೂ ಇರುವ ಆ ಸ್ವಾಮಿಯನ್ನೇ ಭಜಿಸಿ ಕೃತಾರ್ಥರಾಗಿರಿ''—ಎಂದು ಬೋಧಿಸಿ ಇರುತ್ತಾರೆ.

(ಈ ನವಮಶತಕದ ಸಾರಾಂಶ—)

ಈ ನವಮಶತಕದಲ್ಲಿ—ಶ್ರೀ ಶಠಾರಿಮುನಿವರ್ಯರು (1) ನಿರುಪಾಧಿಕಬನ್ಧುವಾದ ಪರಮಾತ್ಮನನ್ನೇ ಸೇವಿಸಬೇಕೆಂತಲೂ (2) ಶ್ರೀ ಪುಳಿಂಗುಡಿಕ್ಷೇತ್ರಾಧಿಪತಿಯನ್ನೇ ಸೇವಿಸಿ ಆರ್ತಿಶಾನ್ತಿಯನ್ನು ಹೊಂದಬೇಕೆಂತಲೂ (3) ಶ್ರೀಮನ್ನಾರಾಯಣನ ಶೀಲಗುಣಾತಿಶಯಗಳನ್ನೇ ತಮ್ಮ ಮನಸ್ಸು ಯಾವಾಗಲೂ ಅನುಭವಿಸಬೇಕೆಂತಲೂ (4) ಶ್ರೀ ಶಂಖಚಕ್ರಪಾಣಿಯಾದ ಸ್ವಾಮಿಯನ್ನೇ ತಾವು ಸೇವಿಸಿ ಕೃತಾರ್ಥರಾಗಬೇಕೆಂತಲೂ (5) ನಾಯಿಕಾವಸ್ಥೆಯಂಪಡೆದು ಪಕ್ಷಿಗಣಗಳನ್ನು ದೂತಕೃತ್ಯದಲ್ಲಿ ತಾವು ಪ್ರೇರಿಸುವವರಾಗಿಯೂ (6) ತಿರುಕ್ಕಾಟ್ಕರೈಯೆಂಬ ದಿವ್ಯದೇಶದ ಸ್ವಾಮಿಯನ್ನೇ ಸೇವಿಸಬೇಕೆಂತಲೂ (7) ತಿರುಮೂಳಿಕ್ಕಳವೆಂಬ ಕ್ಷೇತ್ರದ ಸ್ವಾಮಿಯನ್ನೇ ಭಜಿಸಬೇಕೆಂತಲೂ (8) ತಿರುನಾವಾಯ್–ಎಂಬ ದಿವ್ಯದೇಶದ ಸ್ವಾಮಿಯನ್ನೇ ಸೇವಿಸಬೇಕೆಂತಲೂ (9) ಶ್ರೀ ಕೃಷ್ಣಾವತಾರದ ವೇಣುಗಾನದ ಮಹಾಮಹಿಮೆಗೆ ನಾನು ಪರವಶನಾಗಿ ಪರಮಾರ್ತಿಯನ್ನು ಹೊಂದಿರುತ್ತೇನೆಂತಲೂ (10) ತಿರುಕ್ಕಣ್ಣಪುರವೆಂಬ ದಿವ್ಯದೇಶದ ಸ್ವಾಮಿಯನ್ನು ಪದ್ಮಗಳಿಂದ ಆರಾಧಿಸಬೇಕೆಂತಲೂ—ಹತ್ತು ದಶಕಗಳಲ್ಲೂ ಕ್ರಮೇಣ ನಿರೂಪಿಸಿ ಇರುತಾರ್ರೆ.

**ಈ ಪ್ರಕಾರ ಈ ನವಮಶತಕದಲ್ಲಿ ಶ್ರೀ ಭಗವದ್ಗುಣಾನುಭವರೂಪವಾದ ಫಲಸ್ವರೂಪವು ವರ್ಣಿಸಲ್ಪಟ್ಟಿದೆ.**

——:❖:——

ಶ್ರೀಮದ್ಯಾದವಶೈಲಶೃಙ್ಗರವಿಣಾ ಶ್ರೀಶಲ್ಕಿಸಿಂಹಾತ್ಮನಾ
ಶ್ರೀಮಲ್ಲೀಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ಹಿತಸ್ಯ ಸಮುಯುತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ನವಮಂ ಕಿಲಾದ್ಯ ಶತಕಂ ಗಾಥಾಸಹಸ್ರೇ ಮುನೇಃ ॥

——❖——

ಲಲಿತಸರಣಿನಾಮ್ನಾ ಕೋಮಲಾ ದಿವ್ಯಭಾವಾ
ಜಯತು ಜಗತಿ ಟೀಕಾ ಮೇಽತ್ರ ಕರ್ಣಾಟವಾಣ್ಯಾ |
ಶಠರಿಪುಮುನಿಗಾಥಾ–ದಿವ್ಯಸಾಹಸ್ರಮಾಲಾ–
ವಿವೃತಿರಮೃತಪೂರ್ಣಾ ಲೋಕಸಞ್ಜೀವಿನೀಯಮ್ ||



ಸಹಸ್ರಗಾಥಾರತ್ನಾವಲ್ಯಾಖ್ಯಾ ವ್ಯಾಖ್ಯಾ ಮಯಾ ಕೃತಾ |
ಗೈರ್ವಾಣೀ ! ಶತಕಂ ತತ್ರ ವ್ಯಾಖ್ಯಾತಂ ನವಮಂ ಶುಭಮ್ ||
ಮಮ ಶ್ರೀಕಲ್ಕಿಸಿಂಹಸ್ಯ ಭಕ್ತ್ಯಾ ಭಗವತೋ ಹರೇಃ |
ಶಠಾರಿವತ್ ಸ್ವಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ||



ಇಂತು ಶ್ರೀ ಶಠಾರಿಮುನಿವರ್ಯ ವಿರಚಿತವಾದ
ತಿರುವಾಯ್ಮೊಳಿಯೆಂಬ

ಸುಪ್ರಸಿದ್ಧವಾದ ಸಹಸ್ರಗಾಥಾತ್ಮಕ–ದ್ರಾವಿಡದಿವ್ಯಪ್ರಬನ್ಧದ
ಲಲಿತಸರಣಿಯೆಂಬ ಕರ್ಣಾಟಭಾಷಾಟೀಕೆಯೊಳ್
ನವಮಶತಕದ ವ್ಯಾಖ್ಯಾನವು ಇಲ್ಲಿಗೆ
ಸಮ್ಪೂರ್ಣವಾಗಿದೆ.



ಶ್ರೀಮತೇ ಶಠಕೋಪಾಯ ನಮಃ
ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ



ಮಙ್ಗಳಂ ಕಲ್ಕಿಸಿಂಹಾಯ ಶ್ರೀಮತೇ ಪರಮಾತ್ಮನೇ |
ಶ್ರೀ ಶಠಾರಿಮುನೀನ್ದ್ರಾಯ ! ಸರ್ವೇಷಾಮಸ್ತು ಮಙ್ಗಳಮ್ ||

